# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೯<br>Volume 149 | ಬೆಂಗಳೂರು, ಗುರುವಾರ, ಮೇ ೧೫, ೨೦೧೪ (ವೈಶಾಖ ೨೫, ಶಕ ವರ್ಷ ೧೯೩೬)<br>Bangalore, Thursday, May 15, 2014 (Vaishakha 25, Shaka Varsha 1936) | ಸಂಚಿಕೆ ೨೦<br>Issue 20 |
|---|---|---|


## ಭಾಗ ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

### ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಆನಂದರಾವ್ ವೃತ್ತ, ಬೆಂಗಳೂರು

**ವಿಷಯ:–** ಶ್ರೀಮತಿ ಜಯಮಣಿ, ಕಿರಿಯ ಮಹಿಳಾ ಆರೋಗ್ಯ ಸಹಾಯಕಿ, ಹೆಂಗಸರ ಮತ್ತು ಮಕ್ಕಳ ಆಸ್ಪತ್ರೆ, ಕೆ.ಜಿ.ಎಫ್, ಕೋಲಾರ ಜಿಲ್ಲೆ, ಇವರು ಸುಳ್ಳು ಅಂಕಪಟ್ಟಿ ನೀಡಿ ಸರ್ಕಾರಿ ಉದ್ಯೋಗವನ್ನು ನೀಡಿರುವ ಆರೋಪದ ಬಗ್ಗೆ ಶಿಸ್ತುಕ್ರಮ–ಅಂತಿಮ ಆದೇಶ.

**ಉಲ್ಲೇಖ :-**
1. ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಗಳು ತುಮಕೂರು ಜಿಲ್ಲೆ ಇವರ ಪತ್ರ ಸಂಖ್ಯೆ: ಜಿಆತು/ಡಿಪಿಎನ್/31/2004–05 ದಿನಾಂಕ:13/09/2004.
2. ರಿಜಿಸ್ಟ್ರಾರ್ ಕರ್ನಾಟಕ ರಾಜ್ಯ ಶುಶ್ರೂಷಾ ಪರಿಷತ್ತು ಇವರ ಪತ್ರ ಸಂಖ್ಯೆ:ಕರಾಶುಪಾ/312/90, ದಿನಾಂಕ:15–07–2005.
3. ನಿರ್ದೇಶನಾಲಯದ ಪತ್ರದ ಸಂಖ್ಯೆ ದೋಷಾರೋಪಣಾ ಪಟ್ಟಿ, ದಿನಾಂಕ:16/05/2012.
4. ನಿರ್ದೇಶನಾಲಯದ ಪತ್ರದ ಸಂಖ್ಯೆ ದಿನಾಂಕ:22/08/2012 (ಇಲಾಖಾ ವಿಚಾರಣಾಧಿಕಾರಿಗಳ ನೇಮಕ).
5. ವಿಚಾರಣಾಧಿಕಾರಿಗಳ ವರದಿ ಪತ್ರ ಸಂಖ್ಯೆ: ಮುಜಾಅ/ಜಾಕೋ/ಎನ್‌ಜಿ–11/12–13, ದಿನಾಂಕ:24/01/2013.

**ಪ್ರಸ್ತಾವನೆ :**

ಮೇಲೆ ಓದಲಾದ (1) ಮತ್ತು (2)ರಲ್ಲಿ ಶ್ರೀಮತಿ ಜಯಮಣಿ, ಕಿರಿಯ ಮಹಿಳಾ ಆರೋಗ್ಯ ಸಹಾಯಕಿ, ಹೆಂಗಸರ ಮತ್ತು ಮಕ್ಕಳ ಆಸ್ಪತ್ರೆ, ಕೆ.ಜಿ.ಎಫ್. ಕೋಲಾರ ಜಿಲ್ಲೆ, ಆದ ಇವರು ಸುಳ್ಳು ಅಂಕಪಟ್ಟಿ ನೀಡಿ ಸರ್ಕಾರಿ ಉದ್ಯೋಗವನ್ನು ಪಡೆದಿರುವ ಬಗ್ಗೆ ಉಪ್ಪಾರಪೇಟೆ ಪೋಲೀಸ್ ಠಾಣೆ, ಬೆಂಗಳೂರು ನಗರ ಜಿಲ್ಲೆ, ಇಲ್ಲಿ ಪ್ರಕರಣ ದಾಖಲಾಗಿದ್ದು, ನ್ಯಾಯಾಲಯಕ್ಕೆ ಪ್ರಕರಣವನ್ನು ಹಾಜರುಪಡಿಸಲಾಗಿದೆ. ಎಸ್.ಎಸ್.ಎಲ್.ಸಿ ಪರೀಕ್ಷೆಯಲ್ಲಿ ಹೆಚ್ಚು ಅಂಕ ಪಡೆದಿರುವ ಅಂಕಪಟ್ಟಿಯನ್ನು ತಂದು ಕರ್ನಾಟಕ ರಾಜ್ಯ ಶುಶ್ರೂಷಕಾ ಪರಿಷತ್ತಿನಲ್ಲಿ ನೋಂದಾಯಿಸಿ ಕಿರಿಯ ಮಹಿಳಾ ಆರೋಗ್ಯ ಸಹಾಯಕಿ ತರಬೇತಿ ಪಡೆದ ಕಾರಣ ಸರ್ಕಾರಿ ಸೇವೆಗೆ ಸೇರಿ ಎಸ್.ಎನ್.ಆರ್. ಆಸ್ಪತ್ರೆ, ಕೋಲಾರ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿರುವುದಾಗಿ ತಿಳಿಸಿರುತ್ತಾರೆಂದು ಈ ಬಗ್ಗೆ ಪ್ರಕರಣ ದಾಖಲಿಸಿಕೊಂಡು ಸರ್ಕಾರಕ್ಕೆ ವಂಚನೆ ಮಾಡಿರುವ ಬಗ್ಗೆ ಮೇಲೆ ಓದಲಾದ (3)ರಲ್ಲಿ ದೋಷಾರೋಪಣಾ ಪಟ್ಟಿಯನ್ನು ಜಾರಿ ಮಾಡಲಾಗಿರುತ್ತದೆ. ಮೇಲೆ ಓದಲಾದ (4) ರಲ್ಲಿ ಪ್ರಕರಣದ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ಸಲುವಾಗಿ ವಿಚಾರಣಾಧಿಕಾರಿಗಳನ್ನು ನೇಮಕಾತಿ ಮಾಡಲಾಗಿರುತ್ತದೆ. ಮೇಲೆ ಓದಲಾದ (5)ರಲ್ಲಿ ವಿಚಾರಣಾಧಿಕಾರಿಗಳು, ವಿಚಾರಣೆ ನಡೆಸಿ ತಮ್ಮ ವರದಿಯಲ್ಲಿ ಕರ್ನಾಟಕ ರಾಜ್ಯ ಶುಶ್ರೂಷಕಾ ಪರಿಷತ್ತಿನಲ್ಲಿ ನೌಕರರು ಹೆಸರು ನೋಂದಾವಣೆ ಮಾಡುವಾಗ ನೀಡಿದ ಮೂಲ ದಾಖಲಾತಿಗಳನ್ನು ಪರಿಶೀಲಿಸಿದಾಗ ಎಸ್.ಎಸ್.ಎಲ್.ಸಿ ಅಂಕ ಪಟ್ಟಿಯ ಬಗ್ಗೆ ಅನುಮಾನ ಬಂದು ಶ್ರೀಮತಿ ಡಿ.ಚನ್ನಮ್ಮ ಪದವಿ ಪೂರ್ವ ಕಾಲೇಜು, ಮಾದಾಪುರ, ಕೊಡಗು ಜಿಲ್ಲೆ ಹಾಗೂ ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ, ಮಲ್ಲೇಶ್ವರಂ ಇವರು ನೀಡಿರುವ ದಾಖಲೆಗಳಿಂದ ಅಭ್ಯರ್ಥಿಯು ಏಪ್ರಿಲ್ 1982ರಲ್ಲಿ ನೋಂದಣಿ ಸಂಖ್ಯೆ: 126214 ಪಡೆದು ಪರೀಕ್ಷೆಯಲ್ಲಿ ಅನುತ್ತೀರ್ಣರಾಗಿರುತ್ತಾರೆ ಎಂಬುದಾಗಿ ತಿಳಿಸಿ, ಮಂಡಳಿಯ ಫಲಿತಾಂಶ ಪಟ್ಟಿಯನ್ನು ದೃಢೀಕರಿಸಿ ಸಲ್ಲಿಸಿರುತ್ತಾರೆ. ಇದರಿಂದಾಗಿ ನೌಕರರ ಶಾಲಾ ದಾಖಲಾತಿ ಹಾಗೂ ನೋಂದಣಿ ಸಮಯದಲ್ಲಿ ಸಲ್ಲಿಸಲಾದ ಅಂಕಪಟ್ಟಿಗೆ ತಾಳೆ ಹೊಂದುವುದಿಲ್ಲವೆಂದು ಕಂಡು ಬಂದ ಕಾರಣ ನೌಕರರು ಸುಳ್ಳು ಅಂಕ ಪಟ್ಟಿ ಪಡೆದು ಸರ್ಕಾರಿ ಸೇವೆಗೆ ಸೇರಿರುವುದು ದಾಖಲೆಗಳಿಂದ ದೃಢಪಟ್ಟಿದ್ದು ನೌಕರರ ಮೇಲಿನ ಆರೋಪವು ಸಾಬೀತಾಗಿರುವುದಾಗಿ ತಿಳಿಸಿ ಇವರನ್ನು ಸೇವೆಯಿಂದ ತೆಗೆದುಹಾಕಬಹುದಾಗಿದೆ (Dismiss) ಎಂದು ಅಭಿಪ್ರಾಯ ನೀಡಿರುತ್ತಾರೆ. ಹಾಗೂ ಸದರಿ ನೌಕರರು ವಿಚಾರಣಾ ಸಮಯದಲ್ಲೇ ದಿನಾಂಕ:–06–09–2010ರಲ್ಲಿ ಮೃತಪಟ್ಟಿರುತ್ತಾರೆ. ಆದ್ದರಿಂದ ಇವರ ಬಗ್ಗೆ ಯಾವುದೇ ಕ್ರಮದ ಅವಶ್ಯಕತೆ ಇರುವುದಿಲ್ಲ ಎಂಬುದಾಗಿ ಅಭಿಪ್ರಾಯ ಪಟ್ಟಿರುತ್ತಾರೆ. ಪ್ರಸ್ತಾವನೆಯಲ್ಲಿ ವಿವರಿಸಿದಂತೆ ವಿಚಾರಣಾಧಿಕಾರಿಗಳ ವರದಿ ಹಾಗೂ ಶಾಲಾ ದಾಖಲಾತಿಗಳನ್ನು ಪರಿಶೀಲಿಸಿ ಈ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಡಿಪಿಎನ್(7) ಸಿಆರ್–19/04–05, ದಿನಾಂಕ:26–3–2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಗಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಎಸ್.ಎನ್. ಜಯರಾಮ್, ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ ಬೆಂಗಳೂರು ಆದ ನಾನು **ಶ್ರೀಮತಿ ಜಯಮಣಿ, ಕಿರಿಯ ಮಹಿಳಾ ಆರೋಗ್ಯ ಸಹಾಯಕಿ, ಹೆಂಗಸರ ಮತ್ತು ಮಕ್ಕಳ ಆಸ್ಪತ್ರೆ, ಕೆ.ಜಿ.ಎಫ್. ಕೋಲಾರ ಜಿಲ್ಲೆ**ರವರು ಸುಳ್ಳು ಅಂಕಪಟ್ಟಿ ನೀಡಿ ಸರ್ಕಾರಿ ಉದ್ಯೋಗವನ್ನು ಪಡೆದಿರುವ ಆರೋಪ ಸಾಬೀತಾಗಿರುವುದರಿಂದ ಇವರ ಮೇಲಿನ ಆರೋಪವನ್ನು ಗಂಭೀರವಾಗಿ ಪರಿಗಣಿಸಿ ಹಾಲಿ ಇವರು ಮೃತ ಪಟ್ಟಿರುವುದರಿಂದ ಇವರಿಗೆ ಯಾವುದೇ ಆರ್ಥಿಕ ಸೌಲಭ್ಯಗಳು ಹಾಗೂ ಅವಲಂಬಿತರಿಗೆ ಯಾವುದೇ ಅನುಕಂಪದ ಆಧಾರದ ನೇಮಕಾತಿಗೆ ಅರ್ಹರಲ್ಲ ಎಂಬ ದಂಡನೆಯನ್ನು ವಿಧಿಸಿ ಪ್ರಕರಣವನ್ನು ಮುಕ್ತಾಯಗೊಳಿಸಲಾಗಿದೆ.

ಆಯುಕ್ತರು,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು
ಬೆಂಗಳೂರು

**PR-221**
**SC - 05**

## ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ

## ಪ್ರಕಟಣೆ

### ಸಂಖ್ಯೆ : ಇಇಇ/ಬೆಂ.ಬೃ.ಕಾ.ಉ.ವಿ/ಎಇಇ-1/ಕ-/13-14/1305-7, ಬೆಂಗಳೂರು, ದಿನಾಂಕ : 15-07-2013

ಕ.ವಿ.ಪ್ರ.ನಿ.ನಿ. ಯು 2003ರ ವಿದ್ಯುಚ್ಛಕ್ತಿ ಸರಬರಾಜು ಅಧಿನಿಯಮ ಪ್ರಕರಣದ 67ರ ಅನ್ವಯ ಯೋಜನೆಗಳನ್ನು ರೂಪಿಸಿದೆ ಹಾಗೂ ಸದರಿ ನಿಯಮದ ಪ್ರಕರಣ 67(2)(c)ರ ಅನ್ವಯ ಈ ಮೂಲಕ ಯೋಜನೆಗಳನ್ನು ಸಾರ್ವಜನಿಕ ತಿಳುವಳಿಕೆಗಾಗಿ ಪ್ರಕಟಿಸುತ್ತಿದೆ. ಯೋಜನೆಯ ವಿವರಗಳು ಈ ರೀತಿ ಇವೆ.

(1) **ಯೋಜನೆಯ ಹೆಸರು :-** ಬೆಂಗಳೂರು ಉತ್ತರ ತಾಲ್ಲೂಕು, ಬೆಂಗಳೂರು ನಗರ ಜಿಲ್ಲೆಯಲ್ಲಿ ಹಾಲಿ ಇರುವ 66 ಕೆ.ವಿ. ಪೀಣ್ಯ-ಬ್ಯಾಡರಹಳ್ಳಿ ವಿದ್ಯುತ್ ಮಾರ್ಗವನ್ನು ಹೆಚ್ಚುವರಿ ವಿದ್ಯುತ್ ಹೊರೆಯನ್ನು ಭರಿಸಲು HTLS ತಂತಿ ಉಪಯೋಗಿಸಿ ಬಲಪಡಿಸುವ ಯೋಜನೆ.

(2) **ಯೋಜನೆಯ ಪ್ರಯೋಜನಗಳು :-** ಹಾಲಿ ಇರುವ 66 ಕೆ.ವಿ. ಪೀಣ್ಯ-ತಿಪ್ಪಗೊಂಡನಹಳ್ಳಿ ವಿದ್ಯುತ್ ಮಾರ್ಗವು ಶೇಕಡ 90ರಷ್ಟು ವಿದ್ಯುತ್ ಹೊರೆಯನ್ನು ಭರಿಸಲಾಗಿದೆ. ಹಾಲಿ ಇರುವ ಕಂಬಗಳು ಹಳೆಯದಾಗಿದ್ದು ಹೆಚ್ಚುವರಿ ವಿದ್ಯುತ್ ಹೊರೆಯನ್ನು ಭರಿಸಲು ಸಾಧ್ಯವಿರುವುದಿಲ್ಲ. ಆದ ಕಾರಣ ಹಾಲಿ ಇರುವ ಹಳೆಯ ಕಂಬಗಳು ಮತ್ತು ವಿದ್ಯುತ್ ತಂತಿಯನ್ನು ಬದಲಾಯಿಸಲಾಗುತ್ತಿದೆ. ಈ ಜಾಗ ಕೈಗಾರಿಕೆ, ವಾಣಿಜ್ಯ, ವ್ಯವಸಾಯ ಹಾಗೂ ಗೃಹಬಳಕೆ ವಿದ್ಯುತ್ ಬಳಕೆದಾರರಿಗೆ ಕೇಂದ್ರ ಜಾಗವಾಗಿರುತ್ತದೆ. ಸಮರ್ಪಕ ವಿದ್ಯುತ್ ಪೂರೈಕೆ ಹಾಗೂ ಅಡಚಣೆ ರಹಿತ ವಿದ್ಯುತ್ ಸರಬರಾಜು ಮಾಡುವುದು ಮತ್ತು ಮುಂದಿನ ಹೆಚ್ಚುವರಿ ವಿದ್ಯುತ್ ಹೊರೆಯನ್ನು ಭರಿಸುವುದು.

(3) **66 ಕೆ.ವಿ. ಮಾರ್ಗ ಹಾದುಹೋಗುವ ಹಳ್ಳಿಗಳು ಮತ್ತು ಪ್ರದೇಶಗಳು :-** ಪೀಣ್ಯ, ಸಂಜಯ ಗಾಂಧಿ ನಗರ, ಮುನೇಶ್ವರ, ಚೌಡೇಶ್ವರಿನಗರ, ಲಕ್ಷ್ಮೀದೇವಿ ನಗರ, ಲಗ್ಗೆರೆ, ಶ್ರೀನಿವಾಸ ನಗರ, ಸುಂಕದಕಟ್ಟೆ, ಬ್ಯಾಡರಹಳ್ಳಿ ಮುಂತಾದ ಪ್ರದೇಶಗಳು.

(4) **ಅಂದಾಜು ವೆಚ್ಚ ಮಾರ್ಗ :** 1318.28 ಲಕ್ಷಗಳು

ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಮೇಲೆ ತಿಳಿಸಿರುವ ಯೋಜನೆಗಳನ್ನು ಕಾರ್ಯಗತಗೊಳಿಸಲು 1885ರ ಭಾರತೀಯ ಟೆಲಿಗ್ರಾಫ್ ಅಧಿನಿಯಮ ಭಾಗ (ಏಏಏ)ರ (ಕೇಂದ್ರೀಯ ಕಾಯಿದೆ 1885ರ 13) ಅನ್ವಯ ಟೆಲಿಗ್ರಾಫ್ ಪ್ರಾಧಿಕಾರಿಗಳು ಹೊಂದಿರುವ ಎಲ್ಲಾ ಅಧಿಕಾರಗಳನ್ನು ಹೊಂದಿರುತ್ತದೆ.

**P.D. 30**
**SC-5**

ಕಾರ್ಯನಿರ್ವಾಹಕ ಇಂಜಿನಿಯರ್ (ವಿದ್ಯುತ್)
ಬೆಂಗಳೂರು ಬೃಹತ್ ಕಾಮಗಾರಿ ಉತ್ತರ ವಿಭಾಗ,
ಕವಿಪ್ರನಿನಿ, ಆನಂದರಾವ್ ವೃತ್ತ, ಬೆಂಗಳೂರು-9

## ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಬೆಂಗಳೂರು ಇವರ ನಡವಳಿಗಳು

**ವಿಷಯ :** ಶ್ರೀ ರಾಜಕುಮಾರ್ ಬಿನ್ ಗುಂಡಪ್ಪ, ದೈನೆ, ಕಿರಿಯ ಪ್ರಯೋಗ ಶಾಲಾ ತಂತ್ರಜ್ಞರು, ಪ್ರಾಥಮಿಕ ಆರೋಗ್ಯ ಕೇಂದ್ರ ತವರಮಳ್ಳಹಳ್ಳಿ, ಸವಣೂರು ತಾ॥ ಹಾವೇರಿ ಜಿಲ್ಲೆ ಇವರ ಅನಧಿಕೃತ ಗೈರುಹಾಜರಿ ಆರೋಪಕ್ಕೆ ಶಿಸ್ತುಕ್ರಮ-ಅಂತಿಮ ಆದೇಶ.

**ಓದಲಾಗಿದೆ :**

1. ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು ಹಾವೇರಿ, ಇವರ ಪತ್ರ ಸಂಖ್ಯೆ : ಜಿಆಕುಕಹಾ/ಸಿಬ್ಬಂದಿ(2)983/13-14, ದಿನಾಂಕ : 19-08-2013.
2. ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು ಹಾವೇರಿ, ಇವರ ಪತ್ರ ಸಂಖ್ಯೆ : ಜಿಆಕುಕಹಾ/ಸಿಬ್ಬಂದಿ(2)1301/13-14, ದಿನಾಂಖ : 03-10-2013.
3. ವೈದ್ಯಾಧಿಕಾರಿಗಳು, ಪ್ರಾಥಮಿಕ ಆರೋಗ್ಯ ಕೇಂದ್ರ, ತವರಮಳ್ಳಹಳ್ಳಿ, ಸವಣೂರು ತಾ॥ ಹಾವೇರಿ ಜಿಲ್ಲೆ ಇವರ ಪತ್ರ ಸಂಖ್ಯೆ : ಪ್ರಾ.ಆ.ಕೇ.ತ/ ಡಿಪಿಎನ್/(ಸಿ)/ಸಿಆರ್64/2013-14, ದಿನಾಂಕ : 19-11-2013.

**ಪ್ರಸ್ತಾವನೆ :**

ಮೇಲೆ ಓದಲಾದ (1)ರಲ್ಲಿ ಶ್ರೀ ರಾಜಕುಮಾರ್ ಬಿನ್ ಗುಂಡಪ್ಪ, ದೈನೆ, ಕಿರಿಯ ಪ್ರಯೋಗ ಶಾಲಾ ತಂತ್ರಜ್ಞರು, ಪ್ರಾಥಮಿಕ ಆರೋಗ್ಯ ಕೇಂದ್ರ ತವರಮಳ್ಳಹಳ್ಳಿ, ಸವಣೂರು ತಾ॥ ಹಾವೇರಿ ಜಿಲ್ಲೆ ಇವರು ನಿರ್ದೇಶನಾಲಯದ ಅಧಿಕೃತ ಜ್ಞಾಪನಾ ಪತ್ರ ಸಂಖ್ಯೆ : ಡಿಆರ್‌ಸಿ/02/ಬಿ.ಎಲ್. 66/03-04, ದಿನಾಂಕ : 18-11-2003ರ ಪ್ರಕಾರ ಹೊಸದಾಗಿ ನೇಮಕಾತಿ ಹೊಂದಿ ದಿನಾಂಕ : 18-12-2003 ರಂದು ಕಿರಿಯ ಪ್ರಯೋಗ ಶಾಲಾ ತಂತ್ರಜ್ಞರಾಗಿ ಸರ್ಕಾರಿ ಸೇವೆಗೆ ಸೇರಿದ್ದು, ನೌಕರರು ಸೇವೆಗೆ ಸೇರಿದಾಗಿನಿಂದ ಪದೇ ಪದೇ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಾಗುತ್ತಿದ್ದು. ಪ್ರಸ್ತುತ ದಿನಾಂಕ :

16-02-2005 ರಿಂದ ಇಲ್ಲಿಯವರೆಗೆ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಾಗಿರುತ್ತಾರೆ. ಈ ಬಗ್ಗೆ ನೌಕರರಿಗೆ ಕರ್ತವ್ಯಕ್ಕೆ ಹಾಜರಾಗಲು ಸೂಚಿಸಿ ಮರುಕರೆ ಪತ್ರಗಳನ್ನು ನೋಂದಾಯಿತ ಅಂಚೆ ಮೂಲಕ ಕಳುಹಿಸಿದ್ದು, ಆ ಪತ್ರಗಳು ಬಟವಾಡೆಯಾಗದೆ ಹಿಂದಿರುಗಿರುತ್ತದೆ. ನೌಕರರಿಗೆ ಸರ್ಕಾರಿ ಸೇವೆಯಲ್ಲಿ ಮುಂದುವರೆಯಲು ಆಸಕ್ತಿ ಇಲ್ಲದಿರುವುದು ಕಂಡುಬಂದಿದ್ದು, ನೌಕರರ ಖಾಯಂ ಪೂರ್ವ ಸೇವಾವಧಿ ಸಹ ಘೋಷಣೆಯಾಗದೇ ಇರುವುದರಿಂದ ನೌಕರರ ವಿರುದ್ಧ ನಿಯಮಾನುಸಾರ ಶಿಸ್ತು ಕ್ರಮ ಕೈಗೊಳ್ಳಲು ಕೋರಿರುತ್ತಾರೆ. ಸದರಿಯವರು ನೇಮಕಾತಿ ಹೊಂದಿ ಪರೀಕ್ಷಾರ್ಥಿ (Probationer) ಅವಧಿಯನ್ನು ಇನ್ನು ತೃಪ್ತಿಕರವಾಗಿ ಪೂರೈಸಿರುವುದಿಲ್ಲ. ಪರೀಕ್ಷಾರ್ಥ ಅವಧಿಯನ್ನು ತೃಪ್ತಿಕರವಾಗಿ ಪೂರೈಸದ ಸರ್ಕಾರಿ ನೌಕರರನ್ನು ಯಾವುದೇ ಮುನ್ಸೂಚನೆ ನೀಡದೆ ಸೇವೆಯಿಂದ ವಿಮೋಚನೆ ಮಾಡಲು 1977ರ ಖಾಯಂ ಪೂರ್ವ ಸೇವಾ ನಿಯಮದಡಿಯಲ್ಲಿ ಅವಕಾಶ ಕಲ್ಪಿಸಲಾಗಿದೆ. ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಶೀಲಿಸಿದ ತರುವಾಯ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ ಸಂಖ್ಯೆ : ಡಿಪಿಎನ್ (13) ಸಿಆರ್-23/2013-14, ದಿನಾಂಕ : 21-03-2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಗಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಎಸ್.ಎನ್. ಜಯರಾಮ್, ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಆದ ನಾನು ಶ್ರೀ ರಾಜಕುಮಾರ್ ಬಿನ್ ಗುಂಡಪ್ಪ, ದೈನೆ, ಕಿರಿಯ ಪ್ರಯೋಗ ಶಾಲಾ ತಂತ್ರಜ್ಞರು, ಪ್ರಾಥಮಿಕ ಆರೋಗ್ಯ ಕೇಂದ್ರ ತವರಮಳ್ಳಹಳ್ಳಿ, ಸವಣೂರು ತಾ॥ ಹಾವೇರಿ ಜಿಲ್ಲೆ ಇವರು ದಿನಾಂಕ : 16-02-2005 ರಿಂದ ಇಲ್ಲಿಯವರೆಗೂ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಾಗಿದ್ದು, ನೌಕರರು ಖಾಯಂ ಪೂರ್ವ ಸೇವಾವಧಿ ಅವಧಿಯಲ್ಲಿಯೇ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿರುವ ಆರೋಪವನ್ನು ಗಂಭೀರವಾಗಿ ಪರಗಣಿಸಿ ಈ ತಕ್ಷಣದಿಂದ ಜಾರಿಗೆ ಬರುವಂತೆ ಕರ್ನಾಟಕ ನಾಗರೀಕ ಸೇವಾ (ಪ್ರೊಬೇಷನ್) ನಿಯಮಗಳ 1977ರ ನಿಯಮ 6(1)ಬಿ ಪ್ರಕಾರ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಿ ಆದೇಶಿಸಿರುತ್ತೇನೆ.

**ಆಯುಕ್ತರು,**
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು,
ಬೆಂಗಳೂರು.

**P.R. 233**

## ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರ ನಡವಳಿಗಳು

**ವಿಷಯ :** ಶ್ರೀ ಸುರೇಶಪ್ಪ ಉಜ್ಜನಗೌಡ ಕಿರಿಯ ಪುರುಷ ಆರೋಗ್ಯ ಸಹಾಯಕ, ಪ್ರಾಥಮಿಕ ಆರೋಗ್ಯ ಕೇಂದ್ರ, ಬಟಕುರ್ಕಿ ರಾಮದುರ್ಗ ತಾ॥ ಬೆಳಗಾಂವ ಜಿಲ್ಲೆ ಇವರ ಅನಧಿಕೃತ ಗೈರುಹಾಜರಿ ಆರೋಪಕ್ಕೆ ಶಿಸ್ತುಕ್ರಮ-ಅಂತಿಮ ಆದೇಶ.

**ಓದಲಾಗಿದೆ :**
1. ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು, ಬೆಳಗಾಂ, ಇವರ ಪತ್ರ ಸಂಖ್ಯೆ : ಸಿಬ್ಬಂದಿ(1)/ಡಿಪಿಎನ್/219/ಸಿವಿ/10-11, ದಿನಾಂಕ : 15-12-2011 ಹಾಗೂ 07-08-2013.
2. ನಿರ್ದೇಶನಾಲಯದ ಅಧಿಕೃತ ಜ್ಞಾಪನಾ ಪತ್ರ ಸಂ. ಡಿಪಿಎನ್(12)ಸಿಆರ್/34/11-12, ದಿನಾಂಕ : 21-04-2012.

**ಪ್ರಸ್ತಾವನೆ :**

ಮೇಲೆ ಓದಲಾದ (1)ರಲ್ಲಿ ಶ್ರೀ ಸುರೇಶಪ್ಪ ಉಜ್ಜನಗೌಡ ಕಿರಿಯ ಪುರುಷ ಆರೋಗ್ಯ ಸಹಾಯಕ, ಪ್ರಾಥಮಿಕ ಆರೋಗ್ಯ ಕೇಂದ್ರ, ಬಟಕುರ್ಕಿ ರಾಮದುರ್ಗ ತಾ॥ ಬೆಳಗಾಂವ ಜಿಲ್ಲೆ ಇವರು ದಿನಾಂಕ : 20-11-2010 ರಂದು ಹೊಸದಾಗಿ ನೇಮಕಾತಿ ಹೊಂದಿ ದಿನಾಂಕ : 21-11-2010 ಅನಧಿಕೃತ ಗೈರು ಹಾಜರಾಗಿರುವುದಾಗಿ ತಿಳಿಸಿ, ಈ ಬಗ್ಗೆ ನೌಕರರಿಗೆ ಕರ್ತವ್ಯಕ್ಕೆ ಹಾಜರಾಗಲು ಸೂಚಿಸಿ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಿದ್ದರೂ ಸಹ ನೌಕರರು ಯಾವುದೇ ಲಿಖಿತ ಪ್ರತ್ಯುತ್ತರ ಸಲ್ಲಿಸಿರುವುದಿಲ್ಲವೆಂದು ತಿಳಿಸಿ, ದಿನಾಂಕ : 07-08-2013 ರ ಪತ್ರದಲ್ಲಿ ನೌಕರರಿಗೆ ಉಲ್ಲೇಖ (2)ರ ಆದೇಶದಲ್ಲಿ ಕರ್ತವ್ಯಕ್ಕೆ ಹಾಜರಾಗಲು ಇಲಾಖಾ ವಿಚಾರಣೆ ಬಾಕಿ ಇರಿಸಿ ಅನುಮತಿಯನ್ನು ನೀಡಿದ್ದರೂ ಸಹ ನೌಕರರು ಕರ್ತವ್ಯಕ್ಕೆ ವರದಿ ಮಾಡಿಕೊಳ್ಳದೇ ಅನಧಿಕೃತ ಗೈರು ಹಾಜರಿಯಲ್ಲಿಯೇ ಉಳಿದಿರುವುದಾಗಿ ತಿಳಿಸಿ, ನೌಕರರು ಖಾಯಂ ಪೂರ್ವ ಸೇವಾವಧಿಯಲ್ಲಿಯೇ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಾಗಿರುವುದರಿಂದ ನಿಯಮಾನುಸಾರ ಕ್ರಮ ಕೈಗೊಳ್ಳಲು ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸದರಿಯವರು ನೇಮಕಾತಿ ಹೊಂದಿ ಪರೀಕ್ಷಾರ್ಥಿ (Probationer) ಅವಧಿಯನ್ನು ಇನ್ನು ತೃಪ್ತಿಕರವಾಗಿ ಪೂರೈಸಿಲ್ಲ. ಪರೀಕ್ಷಾರ್ಥ ಅವಧಿಯನ್ನು ತೃಪ್ತಿಕರವಾಗಿ ಪೂರೈಸದ ಸರ್ಕಾರಿ ನೌಕರರನ್ನು ಯಾವುದೇ ಮುನ್ಸೂಚನೆ ನೀಡದೆ ಸೇವೆಯಿಂದ ವಿಮೋಚನೆ ಮಾಡಲು 1977ರ ಖಾಯಂ ಪೂರ್ವ ಸೇವಾ ನಿಯಮದಡಿಯಲ್ಲಿ ಅವಕಾಶ ಕಲ್ಪಿಸಲಾಗಿದೆ. ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಶೀಲಿಸಿದ ತರುವಾಯ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ ಸಂಖ್ಯೆ : ಡಿಪಿಎನ್ (12) ಸಿಆರ್-34/2011-12, ದಿನಾಂಕ : 07-12-2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಗಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ವಿ.ಬಿ. ಪಾಟೀಲ್, ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಆದ ನಾನು ಶ್ರೀ ಸುರೇಶಪ್ಪ ಉಜ್ಜನಗೌಡ ಕಿರಿಯ ಪುರುಷ ಆರೋಗ್ಯ ಸಹಾಯಕ, ಪ್ರಾಥಮಿಕ ಆರೋಗ್ಯ ಕೇಂದ್ರ, ಬಟಕುರ್ಕಿ ರಾಮದುರ್ಗ ತಾ॥ ಬೆಳಗಾಂವ ಜಿಲ್ಲೆ. ಆದ ಇವರು ದಿನಾಂಕ : 21-11-2010 ರಿಂದ ಇಲ್ಲಿಯವರೆಗೂ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಾಗಿದ್ದು, ನೌಕರರು ಖಾಯಂ ಪೂರ್ವ ಸೇವಾವಧಿ ಅವಧಿಯಲ್ಲಿಯೇ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿರುವ ಆರೋಪವನ್ನು ಗಂಭೀರವಾಗಿ ಪರಿಗಣಿಸಿ ಈ ತಕ್ಷಣದಿಂದ ಜಾರಿಗೆ ಬರುವಂತೆ ಕರ್ನಾಟಕ ನಾಗರೀಕ ಸೇವಾ (ಪ್ರೊಬೇಷನ್) ನಿಯಮಗಳ 1977ರ ನಿಯಮ 6(1)ಬಿ ಪ್ರಕಾರ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಿ ಆದೇಶಿಸಿರುತ್ತೇನೆ.

**ಆಯುಕ್ತರು,**
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು,
ಬೆಂಗಳೂರು.

**P.R. 234**

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ : ಬಿ3 : ಅಮೊ. ವಾಹನ : ವಿವ : 39/10-11, ದಿನಾಂಕ : 26-02-2014.**

| | |
|---|---|
| **ಉಪಸ್ಥಿತರು :** | ಪಿ.ಪಿ. ಬ್ಯಾನರ್ಜಿ, ಕ.ಅ.ಸೇ.<br>ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ. |
| **ಫಿರ್ಯಾದಿದಾರರು :** | ವಲಯ ಅರಣ್ಯಾಧಿಕಾರಿ, ಆನವಟ್ಟಿ ವಲಯ, ಆನವಟ್ಟಿ (ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ) |
| **ಆರೋಪಿಗಳು** | ವೃಷಬೇಂದ್ರಗೌಡ ಬಿನ್ ರೇವಣಪ್ಪ ಗೌಡ |
| **ಅರ್ಜಿದಾರರು** | 1. ಚಂದ್ರಪ್ಪ ಬಿನ್ ಬಂಗಾರಪ್ಪ, ಕಾತೊಳ್ಳಿ ವಾಸಿ, ಕೆರೆಹಳ್ಳಿ ಗ್ರಾಮ, ಸೊರಬ ತಾ॥<br>2. ಮಾಲತೇಶ ಬಿನ್ ಹನುಮಂತಪ್ಪ, ಕಾತೊಳ್ಳಿ ವಾಸಿ, ಕೆರೆಹಳ್ಳಿ ಗ್ರಾಮ, ಸೊರಬ ತಾ॥ |

**ಪ್ರಸ್ತಾವನೆ :-**

ದಿನಾಂಕ : 15-10-2010 ರಂದು ಎರಡು ಪವರ್ ಟಿಲ್ಲರ್‌ಗಳ ಸಹಾಯದಿಂದ ಜಂಬಿಟ್ಟಿಗೆ ಕಲ್ಲುಗಳನ್ನು ಅಕ್ರಮವಾಗಿ ತೆಗೆಯುತ್ತಿರುವುದನ್ನು ವಲಯ ಅರಣ್ಯಾಧಿಕಾರಿ, ಆನವಟ್ಟಿ ಇವರು ಪತ್ತೆಹಚ್ಚಿ ಬರೆದ ಮಹಜರ್ ಈ ಕೆಳಗಿನಂತಿದೆ.

ದಿನಾಂಕ : 15-10-2010 ರಂದು ವಲಯ ಅರಣ್ಯಾಧಿಕಾರಿ, ಆನವಟ್ಟಿ ವಲಯ ಮತ್ತು ಸಿಬ್ಬಂದಿಯವರಿಗೆ ಬಂದ ಖಚಿತ ವರ್ತಮಾನದ ಮೇರೆಗೆ ಸೊರಬ ತಾಲ್ಲೂಕು ಕುಪ್ಪಗಡ್ಡೆ ಗ್ರಾಮದ ಸ.ನಂ. 20ರ ಅರಣ್ಯ ಪ್ರದೇಶದಲ್ಲಿ 2 ಟಿಲ್ಲರ್‌ನ ಯಂತ್ರಗಳ ಸಹಾಯದಿಂದ ಜಂಬಿಟ್ಟಿಗೆ ಕಲ್ಲುಗಳನ್ನು ಕೊರೆದು ತೆಗೆದು ಸ್ಥಳದಲ್ಲಿ ದಾಸ್ತಾನು ಮಾಡಿರುವುದನ್ನು ನೋಡಿ ಹತ್ತಿರ ಹೋಗುವಷ್ಟರಲ್ಲಿ ನಾಲ್ಕು ಜನ ಆಸಾಮಿಗಳು ಓಡಿ ಹೋಗಿ ಕೈಗೆ ಸಿಗದೆ ಪರಾರಿಯಾದರು. ಓಡಿಹೋದವರಲ್ಲಿ ಒಬ್ಬನನ್ನು ಗುರುತಿಸಲಾಗಿದ್ದು ಅವನ ಹೆಸರು ವೃಷಬೇಂದ್ರ ಗೌಡ ಬಿನ್ ರೇವಣಪ್ಪಗೌಡ, ತಾಳಗುಪ್ಪ ಗ್ರಾಮ, ಸೊರಬ ತಾಲ್ಲೂಕು ಎಂದಾಗಿರುತ್ತದೆ. ಸ್ಥಳ ಪರಿಶೀಲಿಸಲಾಗಿ 2 ಪವರ್ ಟಿಲ್ಲರ್‌ಗಳಿದ್ದು, ಅವುಗಳಿಗೆ ನೋಂದಣಿ ಸಂಖ್ಯೆ ಕಂಡುಬಂದಿರುವುದಿಲ್ಲ. ಒಟ್ಟು 80 ಜಂಬಿಟ್ಟಿಗೆ ಕಲ್ಲುಗಳನ್ನು ಈ ಎರಡು ಟಿಲ್ಲರ್‌ಗಳ ಸಹಾಯದಿಂದ 5 ಮೀಟರ್ ಅಗಲ 10 ಮೀಟರ್ ಉದ್ದದ ಜಾಗದಲ್ಲಿ ಕೊರೆದು ತೆಗೆದಿರುತ್ತಾರೆ.

ಈ ರೀತಿ ಅರಣ್ಯ ಪ್ರದೇಶದಲ್ಲಿ ಜಂಬಿಟ್ಟಿಗೆ ಕೊರೆದು ತೆಗೆದು ಕಾನೂನನ್ನು ಉಲ್ಲಂಘಿಸಿರುವುದರಿಂದ 2 ಟಿಲ್ಲರ್ ಮತ್ತು 80 ಜಂಬಿಟ್ಟಿಗೆ ಕಲ್ಲುಗಳನ್ನು ಮಹಜರ್ ಮತ್ತು ಜಪ್ತು ವರದಿ, ಪ್ರಥಮ ವರ್ತಮಾನ ವರದಿಯೊಂದಿಗೆ ಇಲಾಖಾ ಪರ ವಶಪಡಿಸಿಕೊಂಡು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 33, 71(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ಉಪನಿಯಮ 144, 165ರ ಪ್ರಕಾರ ಆನವಟ್ಟಿ ವಲಯದ ಅ.ಮೊ. ಸಂಖ್ಯೆ : 72/10-11ನ್ನು ದಾಖಲಿಸಿರುತ್ತಾರೆ. ನಂತರ ವಲಯ ಅರಣ್ಯಾಧಿಕಾರಿ, ಆನವಟ್ಟಿ ಇವರು ವಾಹನವನ್ನು ಎಲ್ಲಾ ದಾಖಲೆಗಳೊಂದಿಗೆ ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸರ್ಕಾರಿ ನಾಟಾ ಸಂಗ್ರಹಾಲಯ ಸಾಗರದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ಈ ನ್ಯಾಯಾಲಯದಿಂದ ಆದೇಶವಾಗಿದೆ.

ನಂತರ ಈ 2 ವಾಹನಗಳ ಬಗ್ಗೆ ಶ್ರೀ ಚಂದ್ರಪ್ಪ ಬಿನ್ ಬಂಗಾರಪ್ಪ, ಕಾತೊಳ್ಳಿ ವಾಸಿ, ಕೆರೆಹಳ್ಳಿ ಗ್ರಾಮ, ಸೊರಬ ತಾ॥, ಶ್ರೀ ಮಾಲತೇಶ ಬಿನ್ ಹನುಮಂತಪ್ಪ, ಕಾತೊಳ್ಳಿ ವಾಸಿ, ಕೆರೆಹಳ್ಳಿ ಗ್ರಾಮ, ಸೊರಬ ತಾ॥ ಇವರು ಈ ನ್ಯಾಯಾಲಯಕ್ಕೆ ದಿನಾಂಕ : 18-10-2010ರಂದು ಅರ್ಜಿ ಸಲ್ಲಿಸಿ, ವಾಹನವನ್ನು ಶಿವೇಂದ್ರ ಬಿನ್ ರೇವಣಪ್ಪ ಗೌಡ, ತಾಳಗುಪ್ಪ, ಸೊರಬ ತಾಲ್ಲೂಕು ಇವರು ಬಾಡಿಗೆಗೆ ತೆಗೆದುಕೊಂಡುಹೋಗಿದ್ದರು. ಕಲ್ಲು ಕೋರೆಯ ಜಾಗವು ಅರಣ್ಯ ಇಲಾಖೆಗೆ ಸೇರಿರುವ ಬಗ್ಗೆ ನಮಗೆ ತಿಳಿದಿರಲಿಲ್ಲ. ಬಾಡಿಗೆಗೆ ತೆಗೆದುಕೊಂಡು ಹೋದ 2 ಪವರ್ ಟಿಲ್ಲರ್‌ನ್ನು ಆನವಟ್ಟಿ ವಲಯದ ರೇಂಜರ್ ರವರು ಸೀಜ್ ಮಾಡಿ ಕಾನೂನು ಕ್ರಮ ಜರುಗಿಸಿರುತ್ತಾರೆಂದು, ನಾವು ತುಂಬ ಬಡವರೆಂದು, ವಾಹನ ಬಿಟ್ಟುಕೊಡಲು ಕೋರಿರುತ್ತಾರೆ.

ಆದರೆ ಈ ಇಬ್ಬರೂ ವಾಹನದ ಮೂಲ ದಾಖಲೆಗಳನ್ನು ಹಾಜರ್ಪಡಿಸಿರುವುದಿಲ್ಲ. ಈ ಬಗ್ಗೆ ಈ ನ್ಯಾಯಾಲಯದಿಂದ ಕ್ರ : ಬಿ3 : ಅಮೊ : ವಾಹನ: ವಿವ-39/10-11, ದಿನಾಂಕ : 02-11-2013ರಂದು ತಿಳುವಳಿಕೆ ಪತ್ರ ಜಾರಿ ಮಾಡಿದ್ದು, ಈ ಪತ್ರಕ್ಕೆ ಶ್ರೀ ಚಂದ್ರಪ್ಪನಾಗಲೀ, ಶ್ರೀ ಮಾಲತೇಶನಾಗಲೀ ಇಲ್ಲಿಯವರೆವಿಗೆ ಉತ್ತರ ನೀಡಿರುವುದಿಲ್ಲ ಹಾಗೂ ಸದರಿ ವಾಹನಗಳ ಮೂಲ ದಾಖಲಾತಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿರುವುದಿಲ್ಲ.

ಈ ನಡುವೆ ಈ ವಾಹನದ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ ಬಿ3-ಅಮೊ-ವಾಹನ-ಪ್ರಕಟಣೆ : ಸಿಆರ್-29/11-12, ದಿನಾಂಕ : 16-11-2011 ರಂದು ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಬೆಂಗಳೂರು ಮತ್ತು ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಇವರಿಗೆ ಕಳುಹಿಸಿ ಗೆಜೆಟ್ ಮತ್ತು ದಿನಪ್ರತಿಕೆಯಲ್ಲಿ ಪ್ರಕಟಿಸಲು ಕೋರಲಾಯಿತು. ಅದರಂತೆ ದಿನಾಂಕ : 25-11-2011ರಂದು ವಿಜಯ ಕರ್ನಾಟಕ ದಿನಪತ್ರಿಕೆಯಲ್ಲಿ ಮತ್ತು ದಿನಾಂಕ : 19-04-2012ರಂದು ರಾಜ್ಯ ಗೆಜೆಟ್ ಪತ್ರಿಕೆಯಲ್ಲಿ ಈ ಪ್ರಕಟಣೆಯು ಪ್ರಕಟಗೊಂಡಿರುತ್ತದೆ. ಪತ್ರಿಕೆಯಲ್ಲಿ ಪ್ರಕಟಗೊಂಡ 30 ದಿನಗಳಾದರೂ ವಾಹನ ಮಾಲೀಕರಿರಾಗಲೀ ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಕ್ಲೇಮು ಅರ್ಜಿಯನ್ನು ಸಲ್ಲಿಸಿರುವುದಿಲ್ಲ.

ಸಹಾಯಕ ಸರ್ಕಾರಿ ಅಭಿಯೋಜಕರು ದಿನಾಂಕ : 01-02-2014ರಂದು ವಾದ ಮಂಡಿಸಿ ಸದರಿ 2 ಪವರ್ ಟಿಲ್ಲರ್ ಸಹಾಯದಿಂದ ಅರಣ್ಯ ಪ್ರದೇಶದಲ್ಲಿ ಜಂಬಿಟ್ಟಿಗೆ ಕಲ್ಲುಗಳನ್ನು ಕೊರೆದು ತೆಗೆದಿರುವ ಬಗ್ಗೆ ವಲಯ ಅರಣ್ಯಾಧಿಕಾರಿ, ಆನವಟ್ಟಿ ಇವರು ಪತ್ತೆಹಚ್ಚಿ ಕ್ರಿಮಿನಲ್ ಕೇಸು ದಾಖಲಿಸಿ, ಪ್ರಥಮ ವರ್ತಮಾನ ವರದಿ, ಮಹಜರ್ ವರದಿ, ಜಪ್ತು ವರದಿ ಮತ್ತು ವಿಚಾರಣಾ ವರದಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ಈ ನ್ಯಾಯಾಲಯಕ್ಕೆ ಸಲ್ಲಿಸಿರುವ ದಾಖಲೆಗಳಿಂದ ಈ ವಾಹನಗಳನ್ನು ಅರಣ್ಯ ಪ್ರದೇಶದಲ್ಲಿ ಕಲ್ಲು ಕೋರೆಮಾಡಿ, ಅಕ್ರಮವಾಗಿ ಕಲ್ಲು ತೆಗೆಯಲು ಬಳಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ವಾಹನ ಮತ್ತು ಜಂಬಿಟ್ಟಿಗೆ ಕಲ್ಲುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಅಭಿಯೋಜಕರ ವಾದವನ್ನು ಕೇಳಿದೆ ಹಾಗೂ ಈ ವಾಹನದ ಬಗ್ಗೆ ಹೆಚ್ಚಿನ ಪ್ರಚಾರಕ್ಕಾಗಿ ಪತ್ರಿಕಾ ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯು ರಾಜ್ಯ ಗೆಜೆಟ್‌ನಲ್ಲಿ ಮತ್ತು ದಿನಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರೂ ಹಕ್ಕು ಬಾಧ್ಯತೆಯ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸದೇ ಇದ್ದುದ್ದರಿಂದ ಈ ಪ್ರಕರಣದ ವಿದ್ಯಮಾನಗಳನ್ನು ಅರಿತು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಪಿ.ಪಿ. ಬ್ಯಾನರ್ಜಿ, ಕ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಅರಣ್ಯ ಮೊಕದ್ದಮೆಯಲ್ಲಿ ಜಪ್ತು ಮಾಡಿದ ವಾಹನಗಳಾದ 2 ಪವರ್ ಟಿಲ್ಲರ್ ನಂಬರ್ ಇಲ್ಲ, ಒಂದರ ಇಂಜಿನ್ ನಂಬರ್ 057313, ಛಾಸ್ಸಿಸ್ ನಂಬರ್ ಕಂಡುಬಂದಿಲ್ಲ. ಮೊತ್ತೊಂದರ ಇಂಜಿನ್ ನಂ. 061029, ಛಾಸ್ಸಿಸ್ ನಂಬರ್ ಕಂಡುಬಂದಿಲ್ಲ ಮತ್ತು 80 ಜಂಬಿಟ್ಟಿಗೆ ಕಲ್ಲುಗಳನ್ನು ಅಂತಿಮವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು 80 ಜಂಬಿಟ್ಟಿಗೆ ಕಲ್ಲುಗಳನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದ್ದೇನೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿನಾಂಕ : 26-02-2014 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳ ಒಳಗಾಗಿ ಯಾರೂ ಮೇಲ್ಮನವಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

**ಪಿ.ಪಿ. ಬ್ಯಾನರ್ಜಿ**
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

**P.R. 224**
**SC-25**

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ : ಬಿ3 : ಅಮೊ : ವಾಹನ : ವಿವ : 34/12-13, ದಿನಾಂಕ : 26-02-2014.**

| | |
|---|---|
| **ಉಪಸ್ಥಿತರು :** | ಪಿ.ಪಿ. ಬ್ಯಾನರ್ಜಿ, ಕ.ಅ.ಸೇ.<br>ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ. |
| **ಫಿರ್ಯಾದಿ :** | ವಲಯ ಅರಣ್ಯಾಧಿಕಾರಿ, ಆನಂದಪುರಂ ವಲಯ, ಚೋರಡಿ (ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ) |
| **ಆರೋಪಿಗಳು** | (1) ಮಹೇಶ (2) ಪ್ರಶಾಂತ |
| **ಅರ್ಜಿದಾರರು** | ಯಾರೂ ಅರ್ಜಿ ಸಲ್ಲಿಸಿರುವುದಿಲ್ಲ |

**ಪ್ರಸ್ತಾವನೆ :-**

ದಿನಾಂಕ : 21-02-2013 ರಂದು ಮಾರುತಿ ವ್ಯಾನ್ ಕೆಎ-01-ಎನ್-9317ರಲ್ಲಿ ಬೀಟೆ ನಾಟಾಗಳನ್ನು ಅಕ್ರಮವಾಗಿ ಸಾಗಿಸುತ್ತಿರುವಾಗ ಚೋರಡಿ ಶಾಖೆಯ ಉಪ ವಲಯ ಅರಣ್ಯಾಧಿಕಾರಿ ಇವರು ಪತ್ತೆಹಚ್ಚಿ ಬರೆದ ಮಹಜರ್ ಈ ಕೆಳಗಿನಂತಿದೆ.

ದಿನಾಂಕ : 21-02-2013 ರಂದು ಆನಂದಪುರಂ ವಲಯದ ಚೋರಡಿ ಶಾಖೆಯ ಉಪ ವಲಯ ಅರಣ್ಯಾಧಿಕಾರಿ ಮತ್ತು ಸಿಬ್ಬಂದಿಯವರು ಸಾಗರ ತಾಲ್ಲೂಕು ಆನಂದಪುರಂ ಹೋಬಳಿ ಗಿಳಾಲಗುಂಡಿ ಗ್ರಾಮದ ಬಳಿ ಶಿವಮೊಗ್ಗ-ಸಾಗರ ರಾಷ್ಟ್ರೀಯ ಹೆದ್ದಾರಿ 206ರಲ್ಲಿ ಬೆಳಿಗ್ಗೆ 6-00 ಗಂಟೆ ಸಮಯದಲ್ಲಿ ಗಸ್ತು ತಿರುಗುತ್ತಾ ಬರುತ್ತಿರುವಾಗ ಶಿವಮೊಗ್ಗ ಕಡೆಯಿಂದ ಒಂದು ಮಾರುತಿ ವ್ಯಾನ್ ಬರುತ್ತಿರುವುದನ್ನು ನಿಲ್ಲಿಸಲು ಸೂಚಿಸಿದರೂ ನಿಲ್ಲಿಸದೇ ವೇಗವಾಗಿ ಮುಂದೆ ಚಲಿಸಿದಾಗ ಇಲಾಖಾ ವಾಹನದಲ್ಲಿ ಬೆನ್ನಟ್ಟಿದಾಗ 100 ಮೀಟರ್ ದೂರದಲ್ಲಿ ವಾಹನ ನಿಲ್ಲಿಸಿ ಅದರಲ್ಲಿದ್ದ 5 ಜನ ಅಸಾಮಿಗಳು ಓಡಲು ಪ್ರಾರಂಭಿಸಿದರು. ಅವರನ್ನು ಬೆನ್ನಟ್ಟಿದಾಗ ಒಬ್ಬ ಅಸಾಮಿಯನ್ನು ಹಿಡಿಯಲಾಯಿತು. ಉಳಿದ ಅಸಾಮಿಗಳು ಪರಾರಿಯಾದರು. ಸಿಕ್ಕಿಬಿದ್ದ ಅಸಾಮಿಯನ್ನು ಮಾರುತಿ ವ್ಯಾನ್ ಹತ್ತಿರ ಕರೆತಂದು ಪರಿಶೀಲಿಸಲಾಗಿ ಮಾರುತಿ ವ್ಯಾನ್ ಕೆಎ-01-ಎನ್-9317 (ಛಾಸ್ಸಿಸ್ ನಂ. 132088, ಇಂಜಿನ್ ನಂ. 1237813) ಆಗಿದ್ದು, ವಾಹನದೊಳಗೆ 10 ಸಂಖ್ಯೆ ಬೀಟೆ 0.085 ಎಂ3, 30 ಸಂಖ್ಯೆ ಸಾಗುವಾನಿ ಸೈಜ್ 0.165 ಎಂ3, 20 ಸಾಗುವಾನಿ ರೂಲರ್ 0.028 ಎಂ3 ಸೇರಿದಂತೆ ಒಟ್ಟು 50=0.250 ಎಂ3 ಪ್ರಮಾಣವಿದ್ದು. ಈ ತುಂಡುಗಳ ಮೇಲೆ ಇಲಾಖಾ ಛಾಪಾದ ಗುರುತು ಕಂಡುಬಂದಿರುವುದಿಲ್ಲ. ಇದನ್ನು ಸಾಗಿಸಲು ರಹದಾರಿ ಇರಲಿಲ್ಲವಾದ್ದರಿಂದ ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ, ಆಸಾಮಿ, ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಪ್ರಥಮ ವರ್ತಮಾನ ವರದಿ, ಮಹಜರ್ ವರದಿ ಮತ್ತು ಜಪ್ತು ವರದಿಯೊಂದಿಗೆ ಇಲಾಖಾ ಪರ ವಶಪಡಿಸಿಕೊಂಡು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 24, 62, 71(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ಉಪನಿಯಮ 144, 165ರ ಪ್ರಕಾರ ಆನಂದಪುರಂ ವಲಯದ ಅ.ಮೊ. ಸಂಖ್ಯೆ :87/12-13ನ್ನು ದಾಖಲಿಸಿ, ನಂತರ ವಾಹನದೊಂದಿಗೆ ಎಲ್ಲಾ ದಾಖಲೆಗಳನ್ನು ವಲಯ ಅರಣ್ಯಾಧಿಕಾರಿ, ಆನಂದಪುರಂ ವಲಯ, ಚೋರಡಿ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ.

ವಲಯ ಅರಣ್ಯಾಧಿಕಾರಿ, ಆನಂದಪುರಂ ವಲಯ, ಚೋರಡಿ ಇವರು ಈ ವಾಹನ ಮತ್ತು ದಾಖಲೆಗಳನ್ನು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ. ಈ ವಾಹನವನ್ನು ಸುರಕ್ಷತೆಗಾಗಿಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ದಿಗೆ ಕೊಡಲು ಈ ನ್ಯಾಯಾಲಯದಿಂದ ಆದೇಶವಾಗಿದೆ.

ಈ ವಾಹನದ ಬಿ ಪ್ರತಿಯನ್ನು ಈ ನ್ಯಾಯಾಲಯಕ್ಕೆ ಒದಗಿಸಲು ಈ ನ್ಯಾಯಾಲಯದಿಂದ ಬಿ3 : ಅಮೊ : ವಾಹನ : ವಿವ-34/12-13, ದಿನಾಂಕ : 23-02-2013, 04-07-2013 ರಂದು ಸಾರಿಗೆ ಅಧಿಕಾರಿ, ಕೋರಮಂಗಲ (ಕೇಂದ್ರ), ಬೆಂಗಳೂರು ಇವರಿಗೆ ಪತ್ರ ಬರೆದು ಕೋರಲಾಯಿತು. ಆದರೆ ಇಲ್ಲಿಯವರೆವಿಗೂ ಈ ವಾಹನದ ಬಿ ಪ್ರತಿಯನ್ನು ಈ ನ್ಯಾಯಾಲಯಕ್ಕೆ ಒದಗಿಸಿರುವುದಿಲ್ಲ. ಇದರಿಂದ ಈ ವಾಹನದ ಆರ್.ಸಿ. ಮಾಲೀಕರಿಗೆ ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 71(ಬಿ) (1) ಪ್ರಕಾರ ನೋಟೀಸ್ ಜಾರಿ ಮಾಡಲು ಸಾಧ್ಯವಾಗಿರುವುದಿಲ್ಲ. ಮುಂದೆ ಈ ವಾಹನವನ್ನು ಸರ್ಕಾರಕ್ಕೆ

ಮುಟ್ಟುಗೋಲು ಹಾಕಿಕೊಂಡಾಗಲಾಗಲೀ, ಹರಾಜಿನಲ್ಲಿ ವಿಲೇ ಮಾಡಿದಾಗಲಾಗಲೀ ಆರ್.ಸಿ. ಮಾಲೀಕರು ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿ ಈ ವಾಹನ ಬಿಟ್ಟುಕೊಡಲು ಆದೇಶವಾದಲ್ಲಿ ಅದಕ್ಕೆ ಸಾರಿಗೆ ಅಧಿಕಾರಿ, ಕೋರಮಂಗಲ (ಕೇಂದ್ರ), ಬೆಂಗಳೂರು ಇವರೇ ಸಂಪೂರ್ಣ ಜವಾಬ್ದಾರರಾಗಿರುತ್ತಾರೆ.

ಈ ನಡುವೆ ಈ ವಾಹನದ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ ಬಿ3–ಅಮೊ–ವಾಹನ–ಪ್ರಕಟಣೆ : ವಿವ–19/13–14, ದಿನಾಂಕ : 21–06–2013ರಂದು ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಬೆಂಗಳೂರು ಮತ್ತು ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಇವರಿಗೆ ಕಳುಹಿಸಿ ಗೆಜೆಟ್ ಮತ್ತು ದಿನಪ್ರತಿಕೆಯಲ್ಲಿ ಪ್ರಕಟಿಸಲು ಕೋರಲಾಯಿತು. ಅದರಂತೆ ದಿನಾಂಕ : 09–07–2013ರಂದು ಸಾಗರ ವಾರ್ತಾ ದಿನಪತ್ರಿಕೆಯಲ್ಲಿ ಮತ್ತು ದಿನಾಂಕ : 08–08–2013ರಂದು ರಾಜ್ಯ ಗೆಜೆಟ್ ಪತ್ರಿಕೆಯಲ್ಲಿ ಈ ಪ್ರಕಟಣೆಯು ಪ್ರಕಟಗೊಂಡಿರುತ್ತದೆ. ಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರೂ ವಾಹನ ಮಾಲೀಕರಿರಾಗಲೀ ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಕ್ಲೇಮು ಅರ್ಜಿಯನ್ನು ಸಲ್ಲಿಸಿರುವುದಿಲ್ಲ.

ಸಹಾಯಕ ಸರ್ಕಾರಿ ಅಭಿಯೋಜಕರು ದಿನಾಂಕ : 01–02–2014ರಂದು ವಾದ ಮಂಡಿಸಿ, ಈ ವಾಹನವನ್ನು ಬೀಟೆ ನಾಟಾವನ್ನು ಅಕ್ರಮವಾಗಿ ಸಾಗಿಸಲು ಉಪಯೋಗಿಸಿದ ಬಗ್ಗೆ ಚೋರಡಿ ಶಾಖೆಯ ಉಪ ವಲಯ ಅರಣ್ಯಾಧಿಕಾರಿ ಮತ್ತು ಸಿಬ್ಬಂದಿಯವರು ಪತ್ತೆಹಚ್ಚಿ ಕ್ರಿಮಿನಲ್ ಕೇಸು ದಾಖಲಿಸಿರುತ್ತಾರೆ. ಈ ವಾಹನದಲ್ಲಿ ಬೀಟೆ ನಾಟಾಗಳನ್ನು ಅಕ್ರಮವಾಗಿ ಸಾಗಿಸಿರುವ ಬಗ್ಗೆ ಪ್ರಥಮ ವರ್ತಮಾನ ವರದಿ, ಮಹಜರ್ ವರದಿ, ಮತ್ತು ಜಪ್ತು ವರದಿ, ವಿಚಾರಣಾ ವರದಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ಈ ದಾಖಲೆಗಳಿಂದ ಈ ವಾಹನದಲ್ಲಿ ಅರಣ್ಯ ಉತ್ಪನ್ನಗಳನ್ನು ಅಕ್ರಮವಾಗಿ ಸಾಗಿಸಲು ಬಳಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಅಭಿಯೋಜಕರ ವಾದವನ್ನು ಕೇಳಿದೆ. ಹಾಗೂ ಈ ವಾಹನದ ಬಗ್ಗೆ ಹೆಚ್ಚಿನ ಪ್ರಚಾರಕ್ಕಾಗಿ ಪತ್ರಿಕಾ ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯು ರಾಜ್ಯ ಗೆಜೆಟ್‌ನಲ್ಲಿ ಮತ್ತು ದಿನಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರೂ ಹಕ್ಕು ಬಾಧ್ಯತೆಯ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸದೇ ಇದ್ದುದ್ದರಿಂದ ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಪಿ.ಪಿ. ಬ್ಯಾನರ್ಜಿ, ಕ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಅರಣ್ಯ ಮೊಕದ್ದಮೆಯಲ್ಲಿ ಜಪ್ತು ಮಾಡಿದ ವಾಹನ ಮಾರುತಿ ವ್ಯಾನ್ ಕೆಎ–01–ಎನ್–9317 (ಛಾಸ್ಸಿಸ್ ನಂ. 132088, ಇಂಜಿನ್ ನಂ. 1237813) ಮತ್ತು 10 ಸಂಖ್ಯೆ ಬೀಟೆ ಸೈಜ್ 0.085 ಎಂ3, 30 ಸಂಖ್ಯೆ ಸಾಗುವಾನಿ ಸೈಜ್ 0.165 ಎಂ3, 20 ಸಂಖ್ಯೆ ಸಾಗುವಾನಿ ರೂಲರ್ 0.028 ಎಂ3 ಸೇರಿದಂತೆ ಒಟ್ಟು 50=0.250 ಎಂ3 ನ್ನು ಅಂತಿಮವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದ್ದೇನೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿನಾಂಕ : 26–02–2014 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳ ಒಳಗಾಗಿ ಯಾರು ಮೇಲ್ಮನವಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

**ಪಿ.ಪಿ. ಬ್ಯಾನರ್ಜಿ**
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

**P.R. 225**
**SC-25**

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ

**ಸಂಖ್ಯೆ : ಬಿ3 : ಅಮೊ. ವಾಹನ : ವಿವ : 04/13–14, ದಿನಾಂಕ : 26–02–2014.**

| | |
|---|---|
| **ಉಪಸ್ಥಿತರು :** | ಪಿ.ಪಿ. ಬ್ಯಾನರ್ಜಿ, ಕ.ಅ.ಸೇ.<br>ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ. |
| **ಫಿರ್ಯಾದಿದಾರರು :** | ವಲಯ ಅರಣ್ಯಾಧಿಕಾರಿ, ಹೊಸನಗರ ವಲಯ, ಹೊಸನಗರ (ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ) |
| **ಆರೋಪಿಗಳು** | ಪತ್ತೆಯಾಗಿಲ್ಲ |
| **ಬಾಧ್ಯತೆದಾರರು** | ಯಾರೂ ಅರ್ಜಿ ಸಲ್ಲಿಸಿರುವುದಿಲ್ಲ |

**ಪ್ರಸ್ತಾವನೆ :–**

ದಿನಾಂಕ : 27–06–2013 ರಂದು ಟೆಂಪೋ ಟ್ರಾಕ್ಸ್ ತೂಫಾನ್ ರಲ್ಲಿ ಬೀಟೆ ನಾಟಾ ಅಕ್ರಮವಾಗಿ ಸಾಗಿಸುತ್ತಿರುವುದನ್ನು ಬಟ್ಟೆಮಲ್ಲಪ್ಪ ಶಾಖೆಯ ಉಪ ವಲಯ ಅರಣ್ಯಾಧಿಕಾರಿ ಇವರು ಪತ್ತೆಹಚ್ಚಿ ಬರೆದ ಮಹಜರ್ ಈ ಕೆಳಗಿನಂತಿದೆ.

ದಿನಾಂಕ : 27–06–2013 ರಂದು ಹೊಸನಗರ ವಲಯದ ಬಟ್ಟೆಮಲ್ಲಪ್ಪ ಶಾಖೆಯ ಉಪ ವಲಯ ಅರಣ್ಯಾಧಿಕಾರಿ ಮತ್ತು ಸಿಬ್ಬಂದಿಯವರಿಗೆ ಬಂದ ಖಚಿತ ವರ್ತಮಾನದ ಮೇರೆಗೆ ಹೊಸನಗರ ತಾಲ್ಲೂಕು ಕೆರೆಹಳ್ಳಿ ಹೋಬಳಿ ನಂದಿ ಗ್ರಾಮದ ಸ.ನಂ. 15 ರಲ್ಲಿ ನಂದಿತಲೆಗೆ ಹೋಗುವ ರಸ್ತೆಯಲ್ಲಿ ಬೆಳಿಗ್ಗೆ 2–30ರ ಸಮಯದಲ್ಲಿ ಗಸ್ತು ತಿರುಗುತ್ತಿರುವಾಗ ಕಾಡಿನೊಳಗೆ ಕೆಲವು ಅಸಾಮಿಗಳು ಮರದ ತುಂಡುಗಳನ್ನು ವಾಹನಕ್ಕೆ ತುಂಬುತ್ತಿರುವ ಶಬ್ದ ಕೇಳಿಬಂದಿತು. ಆ ಶಬ್ದ ಬರುವ ಕಡೆ ಬ್ಯಾಟರಿ ಬೆಳಕಿನ ಸಹಾಯದಿಂದ ಸುತ್ತುವರಿಯುತ್ತಿರುವಾಗ ಅಸಾಮಿಗಳಿಗೆ ಬ್ಯಾಟರಿ ಬೆಳಕು ಕಂಡು ವಾಹನ ಅಲ್ಲೇ ಬಿಟ್ಟು ಕೈಗೆ ಸಿಗದೆ ಪರಾರಿಯಾದರು. ನಂತರ ವಾಹನ ನಿಂತ ಸ್ಥಳಕ್ಕೆ ಹೋಗಿ ಪರಿಶೀಲಿಸಲಾಗಿ ವಾಹನ ಟೆಂಪೋ ಟ್ರಾಕ್ಸ್ ಕೆಎ–14–ಎ–3068 (ಛಾಸ್ಸಿಸ್ ನಂ. T57053392J07, ಇಂಜಿನ್ ನಂ. D27021221) ಆಗಿರುತ್ತದೆ. ವಾಹನದೊಳಗಡೆ 4 ಬೀಟೆ ನಾಟಾವಿದ್ದು, ವಾಹನದ ಕೆಳಗಡೆ 5 ಬೀಟೆ ನಾಟಾ

ಬಿದ್ದಿರುತ್ತದೆ. ಒಟ್ಟು 9 ಬೀಟೆ ನಾಟಾಗಳನ್ನು ಅಳತೆ ಮಾಡಲಾಗಿ 1.819 ಎಂ3 ಪ್ರಮಾಣವಿರುತ್ತದೆ. ಮತ್ತು ಈ ನಾಟಾಗಳಿಗೆ ಇಲಾಖಾ ಛಾಪಾದ ಗುರುತಿರಲಿಲ್ಲ. ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ, ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಪ್ರಥಮ ವರ್ತಮಾನ ವರದಿ, ಮಹಜರ್ ವರದಿ ಮತ್ತು ಜಪ್ತು ವರದಿಯೊಂದಿಗೆ ಇಲಾಖಾ ಪರ ವಶಪಡಿಸಿಕೊಂಡು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 24, 62, 71(ಎ), 104(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ಉಪನಿಯಮ 144, 165ರ ಪ್ರಕಾರ ಹೊಸನಗರ ವಲಯದ ಅ.ಮೊ. ಸಂಖ್ಯೆ : 09/13–14ನ್ನು ಬಟ್ಟೆಮಲ್ಲಪ್ಪ ಶಾಖೆಯ ಉಪ ವಲಯ ಅರಣ್ಯಾಧಿಕಾರಿ ದಾಖಲಿಸಿ, ನಂತರ ವಾಹನದೊಂದಿಗೆ ಎಲ್ಲಾ ದಾಖಲೆಗಳನ್ನು ವಲಯ ಅರಣ್ಯಾಧಿಕಾರಿ, ಹೊಸನಗರ ವಲಯ, ಹೊಸನಗರ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ.

ವಲಯ ಅರಣ್ಯಾಧಿಕಾರಿ, ಹೊಸನಗರ ಇವರು ಈ ವಾಹನ ಮತ್ತು ದಾಖಲೆಗಳನ್ನು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ. ಈ ವಾಹನವನ್ನು ಸುರಕ್ಷತೆಗಾಗಿಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ದಿಗೆ ಕೊಡಲು ಈ ನ್ಯಾಯಾಲಯದಿಂದ ಆದೇಶವಾಗಿದೆ.

ಈ ವಾಹನದ ಬಿ ಪ್ರತಿಯನ್ನು ಈ ನ್ಯಾಯಾಲಯಕ್ಕೆ ಒದಗಿಸಲು ಈ ನ್ಯಾಯಾಲಯದಿಂದ ಬಿ3–ಅಮೊ–ವಾಹನ : ವಿವ–04/13–14, ದಿನಾಂಕ : 01–07–2013, ದಿನಾಂಕ : 19–09–2013 ರಂದು ಸಾರಿಗೆ ಅಧಿಕಾರಿ, ಶಿವಮೊಗ್ಗ ಇವರಿಗೆ ಪತ್ರ ಬರೆದು ಕೋರಲಾಯಿತು. ಆದರೆ ಇಲ್ಲಿಯವರೆವಿಗೂ ಈ ವಾಹನದ ಮಾಹಿತಿಯನ್ನಾಗಲೀ, ಬಿ ಪ್ರತಿಯನ್ನಾಗಲೀ ಈ ನ್ಯಾಯಾಲಯಕ್ಕೆ ಒದಗಿಸಿರುವುದಿಲ್ಲ. ಇದರಿಂದ ಈ ವಾಹನದ ಆರ್.ಸಿ. ಮಾಲೀಕರಿಗೆ ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 71(ಬಿ)(1)ರ ಪ್ರಕಾರ ನೋಟೀಸ್ ಜಾರಿ ಮಾಡಲು ಸಾಧ್ಯವಾಗಿರುವುದಿಲ್ಲ. ಮುಂದೆ ಈ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಾಗಲಾಗಲೀ, ಹರಾಜಿನಲ್ಲಿ ವಿಲೇ ಮಾಡಿದಾಗಲಾಗಲೀ ಆರ್.ಸಿ. ಮಾಲೀಕರು ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿ ಅವರಂತೆ ಆದೇಶವಾದಲ್ಲಿ ಅದಕ್ಕೆ ಸಾರಿಗೆ ಅಧಿಕಾರಿ, ಶಿವಮೊಗ್ಗ ಇವರೇ ಸಂಪೂರ್ಣ ಜವಾಬ್ದಾರರಾಗಿರುತ್ತಾರೆ.

ಈ ನಡುವೆ ಈ ವಾಹನದ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ ಬಿ3–ಅಮೊ–ವಾಹನ–ಪ್ರಕಟಣೆ : ಸಿಆರ್–22/13–14, ದಿನಾಂಕ : 29–08–2013 ರಂದು ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಬೆಂಗಳೂರು ಮತ್ತು ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಇವರಿಗೆ ಕಳುಹಿಸಿ ಗೆಜೆಟ್ ಮತ್ತು ದಿನಪತ್ರಿಕೆಯಲ್ಲಿ ಪ್ರಕಟಿಸಲು ಕೋರಲಾಯಿತು. ಅದರಂತೆ ದಿನಾಂಕ : 28–11–2013ರಂದು ರಾಜ್ಯ ಗೆಜೆಟ್ ಪತ್ರಿಕೆಯಲ್ಲಿ ಈ ಪ್ರಕಟಣೆಯು ಪ್ರಕಟಗೊಂಡಿರುತ್ತದೆ. ಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರೂ ವಾಹನ ಮಾಲೀಕರಾಗಲೀ ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಕ್ಲೇಮು ಅರ್ಜಿಯನ್ನು ಸಲ್ಲಿಸಿರುವುದಿಲ್ಲ.

ಸಹಾಯಕ ಸರ್ಕಾರಿ ಅಭಿಯೋಜಕರು ದಿನಾಂಕ : 01–02–2014ರಂದು ವಾದ ಮಂಡಿಸಿ, ಬೀಟೆ ನಾಟಾವನ್ನು ಈ ವಾಹನದಲ್ಲಿ ಅಕ್ರಮವಾಗಿ ಸಾಗಿಸಲು ಉಪಯೋಗಿಸಿದ ಬಗ್ಗೆ ಉಪ ವಲಯ ಅರಣ್ಯಾಧಿಕಾರಿ, ಬಟ್ಟೆಮಲ್ಲಪ್ಪ ಶಾಖೆ ಇವರು ಪತ್ತೆಹಚ್ಚಿ ಕ್ರಿಮಿನಲ್ ಕೇಸು ದಾಖಲಿಸಿರುತ್ತಾರೆ. ಈ ವಾಹನದ ಮೇಲೆ ಕೇಸು ದಾಖಲಿಸಿದ ಬಗ್ಗೆ ಪ್ರಥಮ ವರ್ತಮಾನ ವರದಿ, ಮಹಜರ್ ವರದಿ ಮತ್ತು ಜಪ್ತು ವರದಿಯನ್ನು ವಲಯ ಅರಣ್ಯಾಧಿಕಾರಿ, ಹೊಸನಗರ ಇವರು ಈ ನ್ಯಾಯಾಲಯಕ್ಕೆ ಸಲ್ಲಿಸಿರುವ ದಾಖಲೆಗಳಿಂದ ಈ ವಾಹನವನ್ನು ಅರಣ್ಯ ಉತ್ಪನ್ನಗಳನ್ನು ಅಕ್ರಮವಾಗಿ ಸಾಗಿಸಲು ಬಳಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಅಭಿಯೋಜಕರ ವಾದವನ್ನು ಕೇಳಿದೆ. ಹಾಗೂ ಈ ವಾಹನದ ಬಗ್ಗೆ ಹೆಚ್ಚಿನ ಪ್ರಚಾರಕ್ಕಾಗಿ ಪತ್ರಿಕಾ ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯು ರಾಜ್ಯ ಗೆಜೆಟ್‌ನಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರೂ ಹಕ್ಕು ಬಾಧ್ಯತೆಯ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸದೇ ಇದ್ದುದ್ದರಿಂದ ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಪಿ.ಪಿ. ಬ್ಯಾನರ್ಜಿ, ಕ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಅರಣ್ಯ ಮೊಕದ್ದಮೆಯಲ್ಲಿ ಜಪ್ತು ಮಾಡಿದ ವಾಹನ ಟೆಂಪೋ ಟ್ರಾಕ್ಸ್ ಕೆಎ–14–ಎ–3068 (ಛಾಸ್ಸಿಸ್ ನಂ. T57053392J07, ಇಂಜಿನ್ ನಂ. D27021221) ಮತ್ತು ಬೀಟೆ ನಾಟಾ 9=1.819 ಎಂ3 ನ್ನು ಅಂತಿಮವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದ್ದೇನೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿನಾಂಕ : 26–02–2014 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳ ಒಳಗಾಗಿ ಯಾರು ಮೇಲ್ಮನವಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

**ಪಿ.ಪಿ. ಬ್ಯಾನರ್ಜಿ**
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

P.R. 230

SC-25

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ : ಬಿ3 : ಅಮೊ. ವಾಹನ : ವಿವ : 02/13–14, ದಿನಾಂಕ : 26–02–2014.**

| | |
|---|---|
| **ಉಪಸ್ಥಿತರು :** | ಪಿ.ಪಿ. ಬ್ಯಾನರ್ಜಿ, ಕ.ಅ.ಸೇ.<br>ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ. |
| **ಫಿರ್ಯಾದಿದಾರರು :** | ವಲಯ ಅರಣ್ಯಾಧಿಕಾರಿ, ಅಂಬ್ಲಿಗೊಳ ವಲಯ, ಅಂಬ್ಲಿಗೊಳ (ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ) |
| **ಆರೋಪಿಗಳು** | 1. ಎಸ್. ಸಂತೋಶ್ 2. ಚಂದ್ರಶೆಟ್ಟಿ |
| **ಬಾಧ್ಯತೆದಾರರು** | ಯಾರೂ ಅರ್ಜಿ ಸಲ್ಲಿಸಿರುವುದಿಲ್ಲ |

**ಪ್ರಸ್ತಾವನೆ :–**

ದಿನಾಂಕ : 19–05–2013 ರಂದು ಮಾರುತಿ ವ್ಯಾನ್ ಕೆಎ–09–1459ರಲ್ಲಿ ಬೀಟೆ ನಾಟಾ ಅಕ್ರಮವಾಗಿ ಸಾಗಿಸುತ್ತಿರುವುದನ್ನು ಅಂಬ್ಲಿಗೊಳ ಶಾಖೆಯ ಉಪ ವಲಯ ಅರಣ್ಯಾಧಿಕಾರಿ ಇವರು ಪತ್ತೆಹಚ್ಚಿ ಬರೆದ ಮಹಜರ್ ಈ ಕೆಳಗಿನಂತಿದೆ.

ದಿನಾಂಕ : 19–05–2013 ರಂದು ಅಂಬ್ಲಿಗೊಳ ವಲಯದ ಅಂಬ್ಲಿಗೊಳ ಶಾಖೆಯ ಉಪ ವಲಯ ಅರಣ್ಯಾಧಿಕಾರಿ ಮತ್ತು ಸಿಬ್ಬಂದಿಯವರು ಶಿಕಾರಿಪುರ ತಾಲ್ಲೂಕು ಕಸಬಾ ಹೋಬಳಿ ಕಣಸೋಗಿ ಗ್ರಾಮದ ರಸ್ತೆಯಲ್ಲಿ ಬೆಳಿಗ್ಗೆ 11–30ರ ಸಮಯದಲ್ಲಿ ಗಸ್ತು ಕಾಯುತ್ತಿರುವಾಗ ಆನಂದಪುರಂ ಕಡೆಯಿಂದ ಒಂದು ಮಾರುತಿ ವ್ಯಾನ್ ಬರುತ್ತಿರುವುದನ್ನು ನಿಲ್ಲಿಸಲು ಪ್ರಯತ್ನಿಸಿದಾಗ ಸದರಿ ವಾಹನವು ವೇಗವಾಗಿ ಮುಂದೆ ಹೋಗಿರುತ್ತದೆ. ಅದನ್ನು ಇಲಾಖಾ ವಾಹನದಿಂದ ಬೆನ್ನಟ್ಟಿ ಕಣಸೋಗಿ ಗ್ರಾಮದ ಬಸ್ ನಿಲ್ದಾಣದ ಹತ್ತಿರ ಅಡ್ಡಗಟ್ಟಿ ನಿಲ್ಲಿಸಲಾಯಿತು. ಮಾರುತಿ ವ್ಯಾನನ್ನು ಪರಿಶೀಲಿಸಲಾಗಿ ನಂ. ಕೆಎ–09–1459 (ಛಾಸ್ಸಿಸ್ ನಂ. ST-91-IN-892862, ಇಂಜಿನ್ ನಂ. ಕಾಣಿಸುತ್ತಿಲ್ಲ) ಆಗಿರುತ್ತದೆ. ವಾಹನದೊಳಗಡೆ ಪರಿಶೀಲಿಸಲಾಗಿ ಒರಟು ಕೆತ್ತನೆ ಮಾಡಿದ ಬೀಟೆ 5 ಸೈಜ್ ಇದ್ದು, ಅಳತೆ ಮಾಡಲಾಗಿ 0.146 ಎಂ3 ಪ್ರಮಾಣವಿರುತ್ತದೆ. ಈ ಬೀಟೆ ಸೈಜುಗಳ ಮೇಲೆ ಇಲಾಖಾ ಛಾಪಾದ ಗುರುತಿರಲಿಲ್ಲ. ಹಾಗೂ ಸಾಗಿಸಲು ರಹದಾರಿ ಇರಲಿಲ್ಲ. ಆದ್ದರಿಂದ ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ, ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಪ್ರಥಮ ವರ್ತಮಾನ ವರದಿ, ಮಹಜರ್ ವರದಿ ಮತ್ತು ಜಪ್ತು ವರದಿಯೊಂದಿಗೆ ಇಲಾಖಾ ಪರ ವಶಪಡಿಸಿಕೊಂಡು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 62, 71(ಎ), 104(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ಉಪನಿಯಮ 144, 165ರ ಪ್ರಕಾರ ಅಂಬ್ಲಿಗೊಳ ವಲಯದ ಅ.ಮೊ. ಸಂಖ್ಯೆ : 04/13–14ನ್ನು ಅಂಬ್ಲಿಗೊಳ ಶಾಖೆಯ ಉಪ ವಲಯ ಅರಣ್ಯಾಧಿಕಾರಿ ದಾಖಲಿಸಿ, ನಂತರ ವಾಹನದೊಂದಿಗೆ ಎಲ್ಲಾ ದಾಖಲೆಗಳನ್ನು ವಲಯ ಅರಣ್ಯಾಧಿಕಾರಿ, ಅಂಬ್ಲಿಗೊಳ ವಲಯ, ಅಂಬ್ಲಿಗೊಳ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ.

ವಲಯ ಅರಣ್ಯಾಧಿಕಾರಿ, ಅಂಬ್ಲಿಗೊಳ ಇವರು ಈ ವಾಹನ ಮತ್ತು ದಾಖಲೆಗಳನ್ನು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ. ಈ ವಾಹನವನ್ನು ಸುರಕ್ಷತೆಗಾಗಿಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ಈ ನ್ಯಾಯಾಲಯದಿಂದ ಆದೇಶವಾಗಿದೆ.

ಈ ವಾಹನದ ಬಿ ಪ್ರತಿಯನ್ನು ಈ ನ್ಯಾಯಾಲಯಕ್ಕೆ ಒದಗಿಸಲು ಈ ನ್ಯಾಯಾಲಯದಿಂದ ಬಿ3–ಅಮೊ–ವಾಹನ :ವಿವ–02/13–14, ದಿನಾಂಕ: 04–07–2013ರಂದು ಸಾರಿಗೆ ಅಧಿಕಾರಿ, ಮೈಸೂರು ಇವರಿಗೆ ಪತ್ರ ಬರೆದು ಕೋರಲಾಯಿತು. ಸಾರಿಗೆ ಅಧಿಕಾರಿ, ಮೈಸೂರು ಇವರು ಮಾರುತಿ ವ್ಯಾನ್ ಕೆಎ–09–1459ರ ಬಿ ಪ್ರತಿಯನ್ನು ದಿನಾಂಕ : 10–07–2013ರ ಪತ್ರದಲ್ಲಿ ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ಸದರಿ ಬಿ ಪ್ರತಿಯನ್ನು ಆರ್.ಸಿ. ಮಾಲೀಕರ ಹೆಸರು "The Partner, M/S/Mandovi Motors, K.R.S. Road, Mysore" ಎಂದು ನಮೂದಾಗಿರುತ್ತದೆ. ಈ ಹೆಸರಿಗೆ ಈ ನ್ಯಾಯಾಲಯದಿಂದ ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 71(ಬಿ) (1)ರ ಪ್ರಕಾರ ಮಾರುತಿ ವ್ಯಾನ್ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ನಿಮ್ಮ ತಕರಾರು ಇದ್ದಲ್ಲಿ ನಿಮ್ಮ ಸಮಜಾಯಿಷಿ ಸಲ್ಲಿಸಲು 30 ದಿನಗಳ ಕಾಲಾವಕಾಶ ನೀಡಿ ದಿನಾಂಕ : 06–08–2013ರಂದು ನೋಂದಣಿ ಅಂಚೆ ಮೂಲಕ ಜಾರಿ ಮಾಡಿದೆ. ದಿನಾಂಕ : 13–08–2013ರಂದು ಸ್ವೀಕೃತಿ ಪಡೆದ ಬಗ್ಗೆ ಅಂಚೆ ಇಲಾಖೆಯವರು ಸ್ವೀಕೃತಿ ಪತ್ರವನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ಆದರೆ ವಾಹನ ಬಿಡಿಸಿಕೊಳ್ಳುವ ಬಗ್ಗೆಯಾಗಲೀ, ವಾಹನವನ್ನು ಮಾರಾಟ ಮಾಡಿದ ಬಗ್ಗೆಯಾಗಲೀ ಲಿಖಿತ ಸಮಜಾಯಿಷಿಯನ್ನು ಆರ್.ಸಿ. ಮಾಲೀಕರು ಇಲ್ಲಿರವರೆವಿಗೂ ಈ ನ್ಯಾಯಾಲಯಕ್ಕೆ ಸಲ್ಲಿಸಿರುವುದಿಲ್ಲ.

ಈ ನಡುವೆ ಈ ವಾಹನದ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ ಬಿ3–ಅಮೊ–ವಾಹನ–ಪ್ರಕಟಣೆ : ವಿವ–19/13–14, ದಿನಾಂಕ : 21–06–2013ರಂದು ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಬೆಂಗಳೂರು ಮತ್ತು ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಇವರಿಗೆ ಕಳುಹಿಸಿ ಗೆಜೆಟ್ ಮತ್ತು ದಿನಪತ್ರಿಕೆಯಲ್ಲಿ ಪ್ರಕಟಿಸಲು ಕೋರಲಾಯಿತು. ಅದರಂತೆ ದಿನಾಂಕ : 10–07–2013ರಂದು ಸಾಗರ ಸಂದೇಶ ದಿನಪತ್ರಿಕೆಯಲ್ಲಿ, ದಿನಾಂಕ : 08–08–2013ರಂದು ರಾಜ್ಯ ಗೆಜೆಟ್ ಪತ್ರಿಕೆಯಲ್ಲಿ ಈ ಪ್ರಕಟಣೆಯು ಪ್ರಕಟಗೊಂಡಿರುತ್ತದೆ. ಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರೂ ವಾಹನ ಮಾಲೀಕರಾಗಲೀ ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಕ್ಲೇಮು ಅರ್ಜಿಯನ್ನು ಸಲ್ಲಿಸಿರುವುದಿಲ್ಲ.

ಸಹಾಯಕ ಸರ್ಕಾರಿ ಅಭಿಯೋಜಕರು ದಿನಾಂಕ : 01–02–2014ರಂದು ವಾದ ಮಂಡಿಸಿ, ಬೀಟೆ ನಾಟಾವನ್ನು ಈ ವಾಹನದಲ್ಲಿ ಅಕ್ರಮವಾಗಿ ಸಾಗಿಸಲು ಉಪಯೋಗಿಸಿದ ಬಗ್ಗೆ ಉಪ ವಲಯ ಅರಣ್ಯಾಧಿಕಾರಿ ಅಂಬ್ಲಿಗೊಳ ಶಾಖೆ ಇವರು ಪತ್ತೆಹಚ್ಚಿ ಕ್ರಿಮಿನಲ್ ಕೇಸು ದಾಖಲಿಸಿರುತ್ತಾರೆ. ಈ ವಾಹನದ ಮೇಲೆ ಕೇಸು ದಾಖಲಿಸಿದ ಬಗ್ಗೆ ಪ್ರಥಮ ವರ್ತಮಾನ ವರದಿ, ಮಹಜರ್ ವರದಿ, ಜಪ್ತು ವರದಿಯನ್ನು ವಲಯ ಅರಣ್ಯಾಧಿಕಾರಿ, ಅಂಬ್ಲಿಗೊಳ ಇವರು ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ದಾಖಲೆಗಳಿಂದ ಈ ವಾಹನವನ್ನು ಅರಣ್ಯ ಉತ್ಪನ್ನಗಳನ್ನು ಅಕ್ರಮವಾಗಿ ಸಾಗಿಸಲು ಬಳಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಅಭಿಯೋಜಕರ ವಾದವನ್ನು ಕೇಳಿದೆ. ಹಾಗೂ ಈ ವಾಹನದ ಬಗ್ಗೆ ಹೆಚ್ಚಿನ ಪ್ರಚಾರಕ್ಕಾಗಿ ಪತ್ರಿಕಾ ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯು ರಾಜ್ಯ ಗೆಜೆಟ್‌ನಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರೂ ಹಕ್ಕು ಬಾಧ್ಯತೆಯ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸದೇ ಇದ್ದುದ್ದರಿಂದ ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಪಿ.ಪಿ. ಬ್ಯಾನರ್ಜಿ, ಕ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಅರಣ್ಯ ಮೊಕದ್ದಮೆಯಲ್ಲಿ ಜಪ್ತು ಮಾಡಿದ ವಾಹನ ಕೆಎ–09–1459 (ಛಾಸ್ಸಿಸ್ ನಂ ST-91-IN-892862, ಇಂಜಿನ್ ನಂ. ಕಾಣಿಸುತ್ತಿಲ್ಲ) ಮತ್ತು ಬೀಟೆ ಸೈಜ್ 5=0.146 ಎಂ3 ನ್ನು ಅಂತಿಮವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದ್ದೇನೆ. ಈ ಆದೇಶವನ್ನು

ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ **ದಿನಾಂಕ : 26–02–2014** ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳ ಒಳಗಾಗಿ ಯಾರು ಮೇಲ್ಮನವಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

**ಪಿ.ಪಿ. ಬ್ಯಾನರ್ಜಿ**
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

**P.R. 231**
**SC-25**

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ

**ಸಂಖ್ಯೆ : ಬಿ3 : ಅಮೊ. ವಾಹನ : ವಿವ : 03/13–14, ದಿನಾಂಕ : 26–02–2014.**

**ಉಪಸ್ಥಿತರು :** ಪಿ.ಪಿ. ಬ್ಯಾನರ್ಜಿ, ಕ.ಅ.ಸೇ.
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

**ಫಿರ್ಯಾದಿದಾರರು :** ವಲಯ ಅರಣ್ಯಾಧಿಕಾರಿ, ಆನಂದಪುರಂ ವಲಯ, ಚೋರಡಿ (ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ).

**ಬಾಧ್ಯತೆದಾರರು** ಯಾರೂ ಅರ್ಜಿ ಸಲ್ಲಿಸಿರುವುದಿಲ್ಲ

**ಪ್ರಸ್ತಾವನೆ :–**

ದಿನಾಂಕ : 24–05–2013 ರಂದು ಸುಜುಕಿ ಮ್ಯಾಕ್ಸ್ 100 ಬೈಕ್ ಕೆಎ–25–ಎ–24ರಲ್ಲಿ ಸಾಗುವಾನಿ ನಾಟಾ ಅಕ್ರಮವಾಗಿ ಸಾಗಿಸುತ್ತಿರುವಾಗ ಚೋರಡಿ ಶಾಖೆಯ ಉಪ ವಲಯ ಅರಣ್ಯಾಧಿಕಾರಿ ಇವರು ಪತ್ತೆಹಚ್ಚಿ ಬರೆದ ಮಹಜರ್ ಈ ಕೆಳಗಿನಂತಿದೆ.

ದಿನಾಂಕ : 24–05–2013 ರಂದು ಆನಂದಪುರಂ ವಲಯದ ಚೋರಡಿ ಶಾಖೆಯ ಉಪ ವಲಯ ಅರಣ್ಯಾಧಿಕಾರಿ ಮತ್ತು ಸಿಬ್ಬಂದಿಯವರು ಶಿವಮೊಗ್ಗ ತಾಲ್ಲೂಕು ಕುಂಸಿ ಹೋಬಳಿ ಹಾಲ್ಕುಣಿ ಗ್ರಾಮದ ಚೋರಡಿ–ಶಿಕಾರಿಪುರ ಮುಖ್ಯ ರಸ್ತೆಯಲ್ಲಿ ಸಂಜೆ 7 ಗಂಟೆ ಸಮಯದಲ್ಲಿ ಗಸ್ತು ತಿರುಗುತ್ತಿರುವಾಗ ಶಿಕಾರಿಪುರದ ಕಡೆಯಿಂದ ಒಂದು ದ್ವಿಚಕ್ರ ವಾಹನ ಬರುತ್ತಿರುವುದನ್ನು ಬ್ಯಾಟರಿ ಬೆಳಕಿನ ಸಹಾಯದಿಂದ ನಿಲ್ಲಿಸಲು ಸೂಚನೆ ನೀಡಿದರೂ ವಾಹನ ನಿಲ್ಲಿಸದೇ ವೇಗವಾಗಿ ಮುಂದೆ ಹೋಗಿರುತ್ತದೆ. ಅದನ್ನು ಇಲಾಖಾ ಬೈಕ್‌ನಿಂದ ಬೆನ್ನಟ್ಟಿ ಸ್ವಲ್ಪ ದೂರದಲ್ಲಿ ಆ ವಾಹನವನ್ನು ಹಿಂದಕ್ಕೆ ಹಾಕಿದಾಗ ಅಸಾಮಿಗಳು ಅವರ ಬೈಕನ್ನು ರಸ್ತೆಯಲ್ಲಿ ಬಿಟ್ಟು ಕಾಡಿನೊಳಗೆ ಓಡಲು ಪ್ರಾರಂಭಿಸಿದರು. ಅವರನ್ನು ಬೆನ್ನಟ್ಟಿದರೂ ಕೈಗೆ ಸಿಗದೆ ಪರಾರಿಯಾದರು. ನಂತರ ವಾಹನದ ಹತ್ತಿರ ಹೋಗಿ ನೋಡಲಾಗಿ ವಾಹನ ಸುಜುಕಿ ಮ್ಯಾಕ್ಸ್ 100 ಬೈಕ್ ಕೆಎ–25–ಎ–24 ಆಗಿದ್ದು, (ಛಾಸ್ಸಿಸ್ ನಂ. 3211291, ಇಂಜಿನ್ ನಂ. ಕಂಡುಬಂದಿರುವುದಿಲ್ಲ) ವಾಹನದ ಸೀಟಿನ ಮೇಲೆ 3 ಹಸಿಯಾದ ಸಾಗುವಾನಿ ತುಂಡುಗಳಿದ್ದು, ಅವುಗಳನ್ನು ಅಳತೆ ಮಾಡಲಾಗಿ 0.111 ಎಂ3 ಪ್ರಮಾಣವಿರುತ್ತದೆ. ಈ ನಾಟಾಗಳ ಮೇಲೆ ಇಲಾಖಾ ಛಾಪಾದ ಗುರುತು ಕಂಡುಬಂದಿರುವುದಿಲ್ಲ. ಹಾಗೂ ಸಾಗಿಸಲು ರಹದಾರಿ ಇರುವುದಿಲ್ಲ. ಆದ್ದರಿಂದ ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ, ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಪ್ರಥಮ ವರ್ತಮಾನ ವರದಿ, ಮಹಜರ್ ವರದಿ ಮತ್ತು ಜಪ್ತು ವರದಿಯೊಂದಿಗೆ ಇಲಾಖಾ ಪರ ವಶಪಡಿಸಿಕೊಂಡು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 33, 62, 71(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ಉಪನಿಯಮ 144, 165ರ ಪ್ರಕಾರ ಆನಂದಪುರಂ ವಲಯದ ಅ.ಮೊ. ಸಂಖ್ಯೆ : 06/13–14ನ್ನು ದಾಖಲಿಸಿ, ನಂತರ ವಾಹನದೊಂದಿಗೆ ಎಲ್ಲಾ ದಾಖಲೆಗಳನ್ನು ವಲಯ ಅರಣ್ಯಾಧಿಕಾರಿ, ಆನಂದಪುರಂ ವಲಯ, ಚೋರಡಿ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ಈ ನ್ಯಾಯಾಲಯದಿಂದ ಆದೇಶವಾಗಿದೆ.

ಸುಜುಕಿ ಮ್ಯಾಕ್ಸ್ 100 ಬೈಕ್ ಕೆಎ–25–ಎ–24ರ ಬಿ ಪ್ರತಿಯನ್ನು ಈ ನ್ಯಾಯಾಲಯಕ್ಕೆ ಒದಗಿಸಲು ಈ ನ್ಯಾಯಾಲಯದಿಂದ ಬಿ3–ಅಮೊ–ವಾಹನ :ವಿವ–22/11–12, ದಿನಾಂಕ: 28–06–2013, 19–09–2013ರಂದು ಸಾರಿಗೆ ಅಧಿಕಾರಿ, ಧಾರವಾಡ ಇವರಿಗೆ ಪತ್ರ ಬರೆದು ಕೋರಲಾಯಿತು. ಆದರೆ ಇಲ್ಲಿಯವರೆವಿಗೂ ಈ ವಾಹನದ ಬಿ ಪ್ರತಿಯನ್ನು ಈ ನ್ಯಾಯಾಲಯಕ್ಕೆ ಒದಗಿಸಿರುವುದಿಲ್ಲ. ಇದರಿಂದ ಈ ವಾಹನದ ಆರ್.ಸಿ. ಮಾಲೀಕರಿಗೆ ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 71(ಬಿ) (1)ರ ಪ್ರಕಾರ ನೋಟೀಸ್ ಜಾರಿ ಮಾಡಲು ಸಾಧ್ಯವಾಗಿರುವುದಿಲ್ಲ. ಮುಂದೆ ಈ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಾಗಲಾಗಲೀ, ಹರಾಜಿನಲ್ಲಿ ವಿಲೇ ಮಾಡಿದಾಗಲಾಗಲೀ ಆರ್.ಸಿ. ಮಾಲೀಕರು ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿ ಅವರಂತೆ ಆದೇಶವಾದಲ್ಲಿ ಅದಕ್ಕೆ ಸಾರಿಗೆ ಅಧಿಕಾರಿ, ಧಾರವಾಡ ಇವರೇ ಸಂಪೂರ್ಣ ಜವಾಬ್ದಾರರಾಗಿರುತ್ತಾರೆ.

ಈ ನಡುವೆ ಈ ವಾಹನದ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ ಬಿ3–ಅಮೊ–ವಾಹನ–ಪ್ರಕಟಣೆ : ಸಿಆರ್–22/13–14, ದಿನಾಂಕ : 29–08–2013ರಂದು ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಬೆಂಗಳೂರು ಮತ್ತು ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಇವರಿಗೆ ಕಳುಹಿಸಿ ಗೆಜೆಟ್ ಮತ್ತು ದಿನಪತ್ರಿಕೆಯಲ್ಲಿ ಪ್ರಕಟಿಸಲು ಕೋರಲಾಯಿತು. ಅದರಂತೆ ದಿನಾಂಕ : 28–11–2013ರಂದು ರಾಜ್ಯ ಗೆಜೆಟ್ ಪತ್ರಿಕೆಯಲ್ಲಿ ಈ ಪ್ರಕಟಣೆಯು ಪ್ರಕಟಗೊಂಡಿರುತ್ತದೆ. ಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರೂ ವಾಹನ ಮಾಲೀಕರಾಗಲೀ ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಕ್ಲೇಮು ಅರ್ಜಿಯನ್ನು ಸಲ್ಲಿಸಿರುವುದಿಲ್ಲ.

ಸಹಾಯಕ ಸರ್ಕಾರಿ ಅಭಿಯೋಜಕರು ದಿನಾಂಕ : 01–02–2014ರಂದು ವಾದ ಮಂಡಿಸಿ, ಸಾಗುವಾನಿ ನಾಟಾವನ್ನು ಈ ವಾಹನದಲ್ಲಿ ಅಕ್ರಮವಾಗಿ ಸಾಗಿಸಲು ಉಪಯೋಗಿಸಿದ ಬಗ್ಗೆ ಚೋರಡಿ ಶಾಖೆಯ ವನಪಾಲಕರು ಮತ್ತು ಸಿಬ್ಬಂದಿಯವರು ಪತ್ತೆಹಚ್ಚಿ ಕ್ರಿಮಿನಲ್ ಕೇಸು ದಾಖಲಿಸಿರುತ್ತಾರೆ. ಈ ವಾಹನದಲ್ಲಿ ಸಾಗುವಾನಿ ನಾಟಾಗಳನ್ನು ಅಕ್ರಮವಾಗಿ ಸಾಗಿಸಿರುವ ಬಗ್ಗೆ ವಿಚಾರಣಾ ವರದಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿರುವ ದಾಖಲೆಗಳಿಂದ ಈ

ವಾಹನವನ್ನು ಅರಣ್ಯ ಉತ್ಪನ್ನಗಳನ್ನು ಅಕ್ರಮವಾಗಿ ಸಾಗಿಸಲು ಬಳಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಅಭಿಯೋಜಕರ ವಾದವನ್ನು ಕೇಳಿದೆ. ಹಾಗೂ ಈ ವಾಹನದ ಬಗ್ಗೆ ಹೆಚ್ಚಿನ ಪ್ರಚಾರಕ್ಕಾಗಿ ಪತ್ರಿಕಾ ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯು ರಾಜ್ಯ ಗೆಜೆಟ್‌ನಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರೂ ಹಕ್ಕು ಬಾಧ್ಯತೆಯ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸದೇ ಇದ್ದುದ್ದರಿಂದ ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಪಿ.ಪಿ. ಬ್ಯಾನರ್ಜಿ, ಕ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಅರಣ್ಯ ಮೊಕದ್ದಮೆಯಲ್ಲಿ ಜಪ್ತು ಮಾಡಿದ ವಾಹನ ಸುಜುಕಿ ಮ್ಯಾಕ್ಸ್ 100 ಬೈಕ್ ಕೆಎ–25–ಎ–24 ಆಗಿದ್ದು, (ಛಾಸ್ಸಿಸ್ ನಂ. 3211291, ಇಂಜಿನ್ ನಂ. ಕಂಡುಬಂದಿರುವುದಿಲ್ಲ) ಮತ್ತು ಸಾಗುವಾನಿ ನಾಟಾ 0.111 ಎಂ3 ನ್ನು ಅಂತಿಮವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದ್ದೇನೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ **ದಿನಾಂಕ : 26–02–2014** ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳ ಒಳಗಾಗಿ ಯಾರು ಮೇಲ್ಮನವಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

**ಪಿ.ಪಿ. ಬ್ಯಾನರ್ಜಿ**
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

**P.R. 232**

**SC-25**

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ

**ಸಂಖ್ಯೆ: ಬಿ3:ಅಮೊ:ವಾಹನ:ವಿವ:16/13–14 ದಿನಾಂಕ: 26–02–2014**

| | | |
|---|---|---|
| **ಉಪಸ್ಥಿತರು** | : | ಪಿ.ಪಿ. ಬ್ಯಾನರ್ಜಿ, ಕ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ |
| **ಪಿರ್ಯಾಧಿದಾರರು** | : | ವಲಯ ಅರಣ್ಯಾಧಿಕಾರಿ, ಆನಂದಪುರಂ ವಲಯ, ಚೋರಡಿ, (ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ) |
| **ಅರೋಪಿಗಳು** | : | 1) ಪುರುಶೋತ್ತಮ 2) ಸತೀಶ |
| **ಅರ್ಜಿದಾರರು** | : | ಯಾರು ಅರ್ಜಿ ಹಾಕಿರುವುದಿಲ್ಲ. |

**ಪ್ರಸ್ತಾವನೆ :**

ದಿನಾಂಕ: 19–09–2013 ರಂದು ಟಿ.ವಿ.ಎಸ್. ವಿಕ್ಟರ್ ಬೈಕ್ ಕೆಎ–19–ಯು–8911 ಸಹಾಯದಿಂದ ಶ್ರೀಗಂಧವನ್ನು ಅಕ್ರಮವಾಗಿ ಸಾಗಿಸುತ್ತಿರುವಾಗ ವಲಯ ಅರಣ್ಯಾಧಿಕಾರಿ, ಆನಂದಪುರಂ ವಲಯ, ಚೊರಡಿ ಇವರು ಪತ್ತೆಹಚ್ಚಿ ಬರೆದ ಮಹಜರ್ ಈ ಕೆಳಗಿನಂತಿದೆ.

ದಿನಾಂಕ: 19–09–2013 ರಂದು ವಲಯ ಅರಣ್ಯಾಧಿಕಾರಿ, ಆನಂದಪುರಂ ವಲಯ, ಚೊರಡಿ ಮತ್ತು ಸಿಬ್ಬಂದಿಯವರು ಸಾಗರ ತಾಲ್ಲೂಕು, ಆನಂದಪುರಂ–ಯಡೆಹಳ್ಳಿ ವೃತ್ತದ ಹತ್ತಿರ ನಿಂತುಕೊಂಡು ರಸ್ತೆಯಲ್ಲಿ ಬರುವ ವಾಹನಗಳನ್ನು ತಪಾಸಣೆ ಮಾಡುತ್ತಿರುವಾಗ ರಿಪ್ಪನ್‌ಪೇಟೆ ಕಡೆಯಿಂದ ಒಂದು ಬೈಕ್‌ನಲ್ಲಿ ಇಬ್ಬರು ಆಸಾಮಿಗಳು ಬರುತ್ತಿರುವುದನ್ನು ನಿಲ್ಲಿಸಲು ಸೂಚಿಸಿದಾಗ ಆಸಾಮಿಗಳು ಬೈಕ್‌ನ್ನು ನಿಲ್ಲಿಸದೆ ಸ್ವಲ್ಪ ದೂರ ಚಲಿಸಿ ಬೈಕನ್ನು ರಸ್ತೆಯಲ್ಲಿ ಹಾಗೆ ಬಿಟ್ಟು ಇಬ್ಬರು ಆಸಾಮಿಗಳು ಓಡಲು ಪ್ರಾರಂಭಿಸಿದರು ಓಡಿಹೋದ ಆಸಾಮಿಗಳನ್ನು ಬೆನ್ನಟ್ಟಿದಾಗ ಒಬ್ಬ ಆಸಾಮಿ ಕೈಗೆ ಸಿಕ್ಕಿರುತ್ತಾನೆ, ಮತ್ತೊಬ್ಬ ಆಸಾಮಿ ಪರಾರಿಯಾಗಿರುತ್ತಾನೆ. ಅವನ ಹೆಸರು ಪುರುಶೋತ್ತಮ ಬಿನ್ ಯಮಕನಾಯ್ಕ ಗವಟೂರು ವಾಸಿ ರಿಪ್ಪನ್‌ಪೇಟೆ ಹೊಸನಗರ ತಾಲ್ಲೂಕು ಎಂದಾಗಿರುತ್ತದೆ. ಸ್ಥಳ ಪರಿಶೀಲಿಸಲಾಗಿ 2 ಪವರ್ ಟಿಲ್ಲರ್‌ಗಳಿದ್ದು, ಅವುಗಳಿಗೆ ನೋಂದಣಿ ಸಂಖ್ಯೆ ಕಂಡುಬಂದಿರುವುದಿಲ್ಲ. ಒಟ್ಟು 80 ಜಂಬಿಟ್ಟಿಗೆ ಕಲ್ಲುಗಳನ್ನು ಈ ಎರಡು ಟಿಲ್ಲರ್‌ಗಳ ಸಹಾಯದಿಂದ 5 ಮೀಟರ್ ಅಗಲ 10 ಮೀಟರ್ ಉದ್ದದ ಜಾಗದಲ್ಲಿ ಕೊರೆದು ತೆಗೆದಿರುತ್ತಾರೆ.

ಈ ರೀತಿ ಅರಣ್ಯ ಪ್ರದೇಶದಲ್ಲಿ ಜಂಬಿಟ್ಟಿಗೆ ಕೊರೆದು ತೆಗೆದು ಕಾನೂನನ್ನು ಉಲ್ಲಂಘಿಸಿರುವುದರಿಂದ 2 ಟಿಲ್ಲರ್ ಮತ್ತು 80 ಜಂಬಿಟ್ಟಿಗೆ ಕಲ್ಲುಗಳನ್ನು ಮಹಜರ್ ಮತ್ತು ಜಪ್ತು ವರದಿ, ಪ್ರಥಮ ವರ್ತಮಾನ ವರದಿಯೊಂದಿಗೆ ಇಲಾಖಾ ಪರ ವಶಪಡಿಸಿಕೊಂಡು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 33, 71(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ಉಪನಿಯಮ 144, 165ರ ಪ್ರಕಾರ ಆನವಟ್ಟಿ ವಲಯದ ಅ.ಮೊ. ಸಂಖ್ಯೆ 72/10–11 ದಾಖಲಿಸಿರುತ್ತಾರೆ. ನಂತರ ವಲಯ ಅರಣ್ಯಾಧಿಕಾರಿ, ಆನವಟ್ಟಿ ಇವರು ವಾಹನವನ್ನು ಎಲ್ಲಾ ದಾಖಲೆಗಳೊಂದಿಗೆ ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸರ್ಕಾರಿ ನಾಟಾ ಸಂಗ್ರಹಾಲಯ ಸಾಗರದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ಈ ನ್ಯಾಯಾಲಯದಿಂದ ಆದೇಶವಾಗಿದೆ.

ನಂತರ ಈ 2 ವಾಹನಗಳ ಬಗ್ಗೆ ಶ್ರೀ ಚಂದ್ರಪ್ಪ ಬಿನ್ ಬಂಗಾರಪ್ಪ, ಕಾತೊಳ್ಳಿ ವಾಸಿ, ಕೆರೆಹಳ್ಳಿ ಗ್ರಾಮ, ಸೊರಬ ತಾ॥ ಶ್ರೀ ಮಾಲತೇಶ ಬಿನ್ ಹನುಮಂತಪ್ಪ, ಕಾತೊಳ್ಳಿ ವಾಸಿ, ಕೆರೆಹಳ್ಳಿ ಗ್ರಾಮ, ಸೊರಬ ತಾ॥ ಇವರು ಈ ನ್ಯಾಯಾಲಯಕ್ಕೆ ದಿನಾಂಕ:18–10–2010ರಂದು ಅರ್ಜಿ ಸಲ್ಲಿಸಿ, ವಾಹನವನ್ನು ಶಿವೇಂದ್ರ ಬಿನ್ ರೇವಣಪ್ಪ ಗೌಡ, ತಾಳಗುಪ್ಪ, ಸೊರಬ ತಾಲ್ಲೂಕು ಇವರು ಬಾಡಿಗೆಗೆ ತೆಗೆದುಕೊಂಡು ಹೋಗಿದ್ದರು, ಕಲ್ಲು ಕೋರೆಯ ಜಾಗವು ಅರಣ್ಯ ಇಲಾಖೆಗೆ ಸೇರಿರುವ ಬಗ್ಗೆ ನಮಗೆ ತಿಳಿದಿರಲಿಲ್ಲ. ಬಾಡಿಗೆಗೆ ತೆಗೆದುಕೊಂಡು ಹೋದ 2 ಪವರ್ ಟಿಲ್ಲರ್‌ನ್ನು ಆನವಟ್ಟಿ ವಲಯದ ರೇಂಜರ್ ರವರು ಸೀಜ್‌ಮಾಡಿ ಕಾನೂನು ಕ್ರಮ ಜರುಗಿಸಿರುತ್ತಾರೆಂದು, ನಾವು ತುಂಬ ಬಡವರೆಂದು, ವಾಹನ ಬಿಟ್ಟುಕೊಡಲು ಕೋರಿರುತ್ತಾರೆ.

ಆದರೆ ಈ ಇಬ್ಬರೂ ವಾಹನದ ಮೂಲ ದಾಖಲೆಗಳನ್ನು ಹಾಜರ್ಪಡಿಸಿರುವುದಿಲ್ಲ. ಈ ಬಗ್ಗೆ ಈ ನ್ಯಾಯಾಲಯದಿಂದ ಕ್ರ:ಬಿ3:ಮೊ:ವಾಹನ: ವಿವ–39/10–11 ದಿನಾಂಕ: 02–11–2013ರಂದು ತಿಳುವಳಿಕೆ ಪತ್ರ ಜಾರಿಮಾಡಿದ್ದು, ಈ ಪತ್ರಕ್ಕೆ ಶ್ರೀ ಚಂದ್ರಪ್ಪನಾಗಲೀ, ಶ್ರೀ ಮಾಲತೇಶನಾಗಲೀ ಇಲ್ಲಿಯವರೆವಿಗೆ ಉತ್ತರ ನೀಡಿರುವುದಿಲ್ಲ ಹಾಗೂ ಸದರಿ ವಾಹನಗಳ ಮೂಲ ದಾಖಲಾತಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿರುವುದಿಲ್ಲ.

ಈ ನಡುವೆ ಈ ವಾಹನದ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ ಬಿ3–ಅಮೊ–ವಾಹನ–ಪ್ರಕಟಣೆ:ಸಿಆರ್–29/11–12, ದಿನಾಂಕ:16–11–2011 ರಂದು ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯ ಪತ್ರಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ ವಿಭಾಗ, ಬೆಂಗಳೂರು ಮತ್ತು ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಇವರಿಗೆ ಕಳುಹಿಸಿ ಗೆಜೆಟ್ ಮತ್ತು ದಿನಪತ್ರಿಕೆಯಲ್ಲಿ ಪ್ರಕಟಿಸಲು ಕೋರಲಾಯಿತು. ಅದರಂತೆ, ದಿನಾಂಕ:25–11–2011ರಂದು ವಿಜಯ ಕರ್ನಾಟಕ ದಿನಪತ್ರಿಕೆಯಲ್ಲಿ ಮತ್ತು ದಿನಾಂಕ:19–04–2012ರಂದು ರಾಜ್ಯ ಗೆಜೆಟ್ ಪ್ರತಿಕೆಯಲ್ಲಿ ಈ ಪ್ರಕಟಣೆಯು ಪ್ರಕಟಗೊಂಡಿರುತ್ತದೆ. ಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರೂ ವಾಹನ ಮಾಲೀಕರಿರಾಗಲೀ ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಕ್ಲೇಮು ಅರ್ಜಿಯನ್ನು ಸಲ್ಲಿಸಿರುವುದಿಲ್ಲ.

ಸಹಾಯಕ ಸರ್ಕಾರಿ ಅಭಿಯೋಜಕರು ದಿನಾಂಕ:01–02–2014ರಂದು ವಾದ ಮಂಡಿಸಿ, ಸದರಿ 2 ಪವರ್ ಟಿಲ್ಲರ್ ಸಹಾಯದಿಂದ ಅರಣ್ಯ ಪ್ರದೇಶದಲ್ಲಿ ಜಂಬಿಟ್ಟಿಗೆ ಕಲ್ಲುಗಳನ್ನು ಕೊರೆದು ತೆಗೆದಿರುವ ಬಗ್ಗೆ ವಲಯ ಅರಣ್ಯಾಧಿಕಾರಿ, ಆನವಟ್ಟಿ ಇವರು ಪತ್ತೆಹಚ್ಚಿ ಕ್ರಿಮಿನಲ್ ಕೇಸು ದಾಖಲಿಸಿ, ಪ್ರಥಮ ವರ್ತಮಾನ ವರದಿ, ಮಹಜರ್ ವರದಿ, ಜಪ್ತು ವರದಿ ಮತ್ತು ವಿಚಾರಣಾ ವರದಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ಈ ನ್ಯಾಯಾಲಯಕ್ಕೆ ಸಲ್ಲಿಸಿರುವ ದಾಖಲೆಗಳಿಂದ ಈ ವಾಹನಗಳನ್ನು ಅರಣ್ಯ ಪ್ರದೇಶದಲ್ಲಿ ಕಲ್ಲು ಕೋರೆಮಾಡಿ, ಅಕ್ರಮವಾಗಿ ಕಲ್ಲು ತೆಗೆಯಲು ಬಳಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ವಾಹನ ಮತ್ತು ಜಂಬಿಟ್ಟಿಗೆ ಕಲ್ಲುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಅಭಿಯೋಜಕರ ವಾದವನ್ನು ಕೇಳಿದೆ, ಹಾಗೂ ಈ ವಾಹನದ ಬಗ್ಗೆ ಹೆಚ್ಚಿನ ಪ್ರಚಾರಕ್ಕಾಗಿ ಪತ್ರಿಕಾ ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯು ರಾಜ್ಯ ಗೆಜೆಟ್‌ನಲ್ಲಿ ಮತ್ತು ದಿನಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರೂ ಹಕ್ಕು ಬಾಧ್ಯತೆಯ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸದೇ ಇದ್ದುದ್ದರಿಂದ ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಪಿ.ಪಿ. ಬ್ಯಾನರ್ಜಿ ಕ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಅರಣ್ಯ ಮೊಕದ್ದಮೆಯಲ್ಲಿ ಜಪ್ತು ಮಾಡಿದ ವಾಹನಗಳಾದ 2 ಪವರ್ ಟಿಲ್ಲರ್ ನಂಬರ್ ಇಲ್ಲ, ಒಂದರ ಇಂಜಿನ್ ನಂಬರ್ 057313, ಛಾಸ್ಸಿಸ್ ನಂಬರ್ ಕಂಡುಬಂದಿಲ್ಲ. ಮತ್ತೊಂದರ ಇಂಜಿನ್ ನಂ: 061029, ಛಾಸ್ಸಿಸ್ ನಂ: ಕಂಡುಬಂದಿಲ್ಲ ಮತ್ತು 80 ಜಂಬಿಟ್ಟಿಗೆ ಕಲ್ಲುಗಳನ್ನು ಅಂತಿಮವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು 80 ಜಂಬಿಟ್ಟಿಗೆ ಕಲ್ಲುಗಳನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದ್ದೇನೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿನಾಂಕ:26–02–2014 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳ ಒಳಗಾಗಿ ಯಾರು ಮೇಲ್ಮನವಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

**ಪಿ.ಪಿ. ಬ್ಯಾನರ್ಜಿ,**
ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ,
ಸಾಗರ

**PR-228**
**SC - 25**

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ

**ಸಂಖ್ಯೆ: ಬಿ3:ಅಮೊ:ವಾಹನ:ವಿವ:09/13–14 ದಿನಾಂಕ: 26–02–2014**

| | | |
|---|---|---|
| **ಉಪಸ್ಥಿತರು** | : | ಪಿ.ಪಿ. ಬ್ಯಾನರ್ಜಿ, ಕ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ |
| **ಪಿರ್ಯಾಧಿದಾರರು** | : | ವಲಯ ಅರಣ್ಯಾಧಿಕಾರಿ, ಹೊಸನಗರ ವಲಯ, ಹೊಸನಗರ, (ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ) |
| **ಅರೋಪಿಗಳು** | : | ಪತ್ತೆಯಾಗಿಲ್ಲ |
| **ಭಾದ್ಯತೆದಾರರು** | : | ಯಾರು ಅರ್ಜಿ ಸಲ್ಲಿಸಿರುವುದಿಲ್ಲ. |

**ಪ್ರಸ್ತಾವನೆ :**

ದಿನಾಂಕ: 03–08–2013 ರಂದು ಬಜಾಜ್ ಪ್ಲಾಟಿನಾ ಬೈಕ್ ಕೆಎ–16–ಕೆ–7208ರಲ್ಲಿ ಶ್ರೀಗಂಧವನ್ನು ಅಕ್ರಮವಾಗಿ ಸಾಗಿಸುತ್ತಿರುವುದನ್ನು ಕಸಬಾ ಶಾಖೆಯ ಉಪ ವಲಯ ಅರಣ್ಯಾಧಿಕಾರಿ ಇವರು ಪತ್ತೆಹಚ್ಚಿ ಬರೆದ ಮಹಜರ್ ಈ ಕೆಳಗಿನಂತಿದೆ.

ದಿನಾಂಕ: 03–08–2013 ರಂದು ಹೊಸನಗರ ವಲಯದ ಕಸಬಾ ಶಾಖೆಯ ಉಪ ವಲಯ ಅರಣ್ಯಾಧಿಕಾರಿ ಮತ್ತು ಸಿಬ್ಬಂದಿಯವರು ಹೊಸನಗರ ತಾಲ್ಲೂಕು ಕಸಬಾ ಹೋಬಳಿ ಮುಂಬಾರು ಗ್ರಾಮದ ಹೊಸನಗರದಿಂದ ರಿಪ್ಪನ್‌ಪೇಟೆಗೆ ಹೋಗುವ ರಾಜ್ಯ ಹೆದ್ದಾರಿಯಲ್ಲಿ ರಾತ್ರಿ 10–30ರ ಸಮಯದಲ್ಲಿ ಗಸ್ತು ತಿರುಗುತ್ತಿರುವಾಗ ಒಂದು ದ್ವಿಚಕ್ರ ವಾಹನ ಕರಿನಗೊಳ್ಳಿ ಕಡೆಯಿಂದ ರಿಪ್ಪನ್‌ಪೇಟೆ ಕಡೆಗೆ ಬರುತ್ತಿರುವುದನ್ನು ನೋಡಿ, ನಿಲ್ಲಿಸಲು ಸೂಚನೆ ನೀಡಿದಾಗ, ಆಸಾಮಿಗಳು ವಾಹನವನ್ನು ಇಲಾಖೆಯವರು ನಿಂತ ಸ್ಥಳದಿಂದ ಸ್ವಲ್ಪ ದೂರ ಹಿಂದೆಯೇ ಬಿಟ್ಟು 2 ಜನ ಆಸಾಮಿಗಳು ವಾಹನದಲ್ಲಿದ್ದ ಒಂದು ಮೂಟೆಯನ್ನು ಎಸೆದು ಕರಿನಗೊಳ್ಳಿ ಕಡೆಗೆ ಓಡಲಾರಂಭಿಸಿದರು. ಅವರನ್ನು ಇಲಾಖೆಯವರು ಬೆನ್ನಟ್ಟಿದರೂ ಕೈಗೆ ಸಿಗದೆ ಪರಾರಿಯಾದರು. ನಂತರ

ವಾಹನವನ್ನು ಪರಿಶೀಲಿಸಲಾಗಿ ಬಜಾಜ್ ಪ್ಲಾಟಿನಾ ಬೈಕ್ ಕೆಎ–16–ಕೆ–7208 (ಛಾಸ್ಸಿಸ್ ನಂ: MD2DDD222NWE 15924 ಇಂಜಿನ್ ನಂ: DUMBNE 61889) ಆಗಿದ್ದು, ಪಕ್ಕದಲ್ಲಿ ಎಸೆದು ಹೋಗಿದ್ದ ಚೀಲವನ್ನು ಬಿಚ್ಚಿ ನೋಡಲಾಗಿ ಸುವಾಸನೆ ಭರಿತ ಶ್ರೀಗಂಧದ ತುಂಡುಗಳಿದ್ದು, ಈ ಶ್ರೀಗಂಧದ ತುಂಡುಗಳನ್ನು ಗರಗಸದಿಂದ ಕತ್ತಾಯಿಸಿದ್ದು, ಇಲಾಖಾ ಛಾಪಾದ ಗುರುತಿರಲಿಲ್ಲ. ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ, ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಪ್ರಥಮ ವರ್ತಮಾನ ವರದಿ, ಮಹಜರ್ ವರದಿ ಮತ್ತು ಜಪ್ತು ವರದಿಯೊಂದಿಗೆ ಇಲಾಖಾ ಪರ ವಶಪಡಿಸಿಕೊಂಡು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 33, 84, 86, 87, 71(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ಉಪನಿಯಮ 144, 165ರ ಪ್ರಕಾರ ಹೊಸನಗರ ವಲಯದ ಅ.ಮೊ. ಸಂಖ್ಯೆ 14/13–14ನ್ನು ದಾಖಲಿಸಿ, ವಾಹನವನ್ನು ಎಲ್ಲಾ ದಾಖಲೆಗಳೊಂದಿಗೆ ವಲಯ ಅರಣ್ಯಾಧಿಕಾರಿ ಹೊಸನಗರ ವಲಯ, ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ.

ವಲಯ ಅರಣ್ಯಾಧಿಕಾರಿ, ಹೊಸನಗರ ಇವರು ಈ ವಾಹನ ಮತ್ತು ದಾಖಲೆಗಳನ್ನು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ. ಈ ವಾಹನವನ್ನು ಸುರಕ್ಷತೆಗಾಗಿಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರು ಸುಪರ್ಧಿಗೆ ಕೊಡಲು ಈ ನ್ಯಾಯಾಲಯದಿಂದ ಆದೇಶವಾಗಿದೆ.

ಈ ವಾಹನದ ಬಿ ಪ್ರತಿಯನ್ನು ಈ ನ್ಯಾಯಾಲಯಕ್ಕೆ ಒದಗಿಸಲು ಈ ನ್ಯಾಯಾಲಯದಿಂದ ಬಿ3:ಅಮೊ:ವಾಹನ:ವಿವ–09./13–14 ದಿನಾಂಕ: 07–08–2013, ದಿನಾಂಕ:19–09–2013ರಂದು ಸಾರಿಗೆ ಅಧಿಕಾರಿ, ಚಿತ್ರದುರ್ಗ ಇವರಿಗೆ ಪತ್ರ ಬರೆದು ಕೋರಲಾಯಿತು. ಆದರೆ ಇಲ್ಲಿಯವರೆವಿಗೂ ಸಾರಿಗೆ ಅಧಿಕಾರಿ, ಚಿತ್ರದುರ್ಗ ಇವರು ಈ ವಾಹನದ ಬಿ ಪ್ರತಿಯನ್ನು ಈ ನ್ಯಾಯಾಲಯಕ್ಕೆ ಒದಗಿಸಿರುವುದಿಲ್ಲ. ಇದರಿಂದ ಈ ವಾಹನದ ಆರ್.ಸಿ. ಮಾಲೀಕರಿಗೆ ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 71(ಬಿ) (1) ಪ್ರಕಾರ ನೋಟಿಸ್ ಜಾರಿ ಮಾಡಲು ಸಾಧ್ಯವಾಗಿರುವುದಿಲ್ಲ. ಮುಂದೆ ಈ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಾಗಲಾಗಲೀ, ಹರಾಜಿನಲ್ಲಿ ವಿಲೇ ಮಾಡಿದಾಗಲಾಗಲೀ ಆರ್.ಸಿ. ಮಾಲೀಕರು ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿ ಅವರಂತೆ ಆದೇಶವಾದಲ್ಲಿ ಅದಕ್ಕೆ ಸಾರಿಗೆ ಅಧಿಕಾರಿ, ಚಿತ್ರದುರ್ಗ ಇವರೇ ಸಂಪೂರ್ಣ ಜವಾಬ್ದಾರರಾಗಿರುತ್ತಾರೆ

ಈ ನಡುವೆ ಈ ವಾಹನದ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ ಬಿ3–ಅಮೊ–ವಾಹನ–ಪ್ರಕಟಣೆ:ಸಿಆರ್–22/13–14, ದಿನಾಂಕ: 29–08–2013 ರಂದು ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ ವಿಭಾಗ, ಬೆಂಗಳೂರು ಮತ್ತು ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಇವರಿಗೆ ಕಳುಹಿಸಿ ಗೆಜೆಟ್ ಮತ್ತು ದಿನಪತ್ರಿಕೆಯಲ್ಲಿ ಪ್ರಕಟಿಸಲು ಕೋರಲಾಯಿತು. ಅದರಂತೆ ದಿನಾಂಕ: 28–11–2013ರಂದು ರಾಜ್ಯ ಗೆಜೆಟ್ ಪತ್ರಿಕೆಯಲ್ಲಿ ಈ ಪ್ರಕಟಣೆಯು ಪ್ರಕಟಗೊಂಡಿರುತ್ತದೆ. ಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರೂ ವಾಹನ ಮಾಲೀಕರಾಗಲೀ ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಕ್ಲೇಮು ಅರ್ಜಿಯನ್ನು ಸಲ್ಲಿಸಿರುವುದಿಲ್ಲ.

ಸಹಾಯಕ ಸರ್ಕಾರಿ ಅಭಿಯೋಜಕರು ದಿನಾಂಕ:01–02–2014ರಂದು ವಾದ ಮಂಡಿಸಿ, ಶ್ರೀಗಂಧವನ್ನು ಈ ವಾಹನದಲ್ಲಿ ಅಕ್ರಮವಾಗಿ ಸಾಗಿಸಲು ಉಪಯೋಗಿಸಿದ ಬಗ್ಗೆ ಕಸಬಾ ಶಾಖೆಯ ಉಪ ವಲಯ ಅರಣ್ಯಾಧಿಕಾರಿ ಪತ್ತೆಹಚ್ಚಿ ಕ್ರಿಮಿನಲ್ ಕೇಸು ದಾಖಲಿಸಿರುತ್ತಾರೆ. ಈ ವಾಹನದ ಮೇಲೆ ಕೇಸು ದಾಖಲಿಸಿದ ಬಗ್ಗೆ ಪ್ರಥಮ ವರ್ತಮಾನ ವರದಿ, ಮಹಜರ್ ವರದಿ, ಜಪ್ತು ವರದಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿರುವ ದಾಖಲೆಗಳಿಂದ ಈ ವಾಹನವನ್ನು ಅರಣ್ಯ ಉತ್ಪನ್ನಗಳನ್ನು ಅಕ್ರಮವಾಗಿ ಸಾಗಿಸಲು ಬಳಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಅಭಿಯೋಜಕರ ವಾದವನ್ನು ಕೇಳಿದೆ ಹಾಗೂ ಈ ವಾಹನದ ಬಗ್ಗೆ ಹೆಚ್ಚಿನ ಪ್ರಚಾರಕ್ಕಾಗಿ ಪತ್ರಿಕಾ ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯು ರಾಜ್ಯ ಗೆಜೆಟ್‌ನಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರೂ ಹಕ್ಕು ಬಾಧ್ಯತೆಯ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸದೇ ಇದ್ದುದ್ದರಿಂದ ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಪಿ.ಪಿ. ಬ್ಯಾನರ್ಜಿ ಕ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಅರಣ್ಯ ಮೊಕದ್ದಮೆಯಲ್ಲಿ ಜಪ್ತು ಮಾಡಿದ ವಾಹನ ಬಜಾಜ್ ಪ್ಲಾಟಿನಾ ಬೈಕ್ ಕೆಎ–16–ಕೆ–7208 (ಛಾಸ್ಸಿಸ್ ನಂ. MD2DDD222NWE 15924, ಇಂಜಿನ್ ನಂ. DUMBNE 61889) ಮತ್ತು ಶ್ರೀಗಂಧದ 5 ತುಂಡುಗಳ ತೂಕ 18 ಕೆ.ಜಿ.ಯನ್ನು ಅಂತಿಮವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದ್ದೇನೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ **ದಿನಾಂಕ:26–02–2014** ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳ ಒಳಗಾಗಿ ಯಾರು ಮೇಲ್ಮನವಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

**ಪಿ.ಪಿ. ಬ್ಯಾನರ್ಜಿ,**
ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ,
ಸಾಗರ

**PR-229**
**SC - 25**

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**

**ಬಿ3/ಅಮೊ/ವಾಹನ/ವಿವ/32/11–12, ದಿನಾಂಕ: 26ನೇ ಫೆಬ್ರವರಿ, 2014**

**ಉಪಸ್ಥಿತರು :** ಪಿ.ಪಿ. ಬ್ಯಾನರ್ಜಿ, ಕ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ

**ಫಿರ್ಯಾದಿದಾರರು :** ವಲಯ ಅರಣ್ಯಾಧಿಕಾರಿ, ಆನವಟ್ಟಿ ವಲಯ, ಆನವಟ್ಟಿ, (ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ)

**ಬಾಧ್ಯತೆದಾರರು :** ಯಾರೂ ಇರುವುದಿಲ್ಲ

